CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಆಗಸ್ಟ್ ೪, ೨೦೦೫ (ಶ್ರಾವಣ ೧೩, ಶಕ ವರ್ಷ ೧೯೨೭) | ಸಂಚಿಕೆ ೩೧ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಮಾರಾಟಾಧಿಕಾರಿ : ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ ಇವರ ನಡಾವಳಿಕೆಗಳು**

**ಇ.ಪಿ.ಸಿ. ನಂ. 927/04-05**

**ವಿಷಯ:** 1960ರ ಕರ್ನಾಟಕ ಸಹಕಾರ ಸಂಘಗಳ ನಿಯಮ 38(2)(ಸಿ) ದರ ಅನ್ವಯ ದಾವಣಗೆರೆ ತಾಲ್ಲೂಕು, ದಾವಣಗೆರೆ ಗ್ರಾಮದವರಾದ ಶ್ರೀ ಎ. ಮರಿಯಣ್ಣ ಬಿನ್ ಈರಣ್ಣ ಇವರ ಸ್ಥಿರಾಸ್ತಿ ಜಪ್ತಿ ಕುರಿತು.

**ಪ್ರಸ್ತಾವನೆ:**

ಶ್ರೀ ಎ. ಮರಿಯಣ್ಣರವರು ದಾವಣಗೆರೆ ಜಿಲ್ಲೆ, ಹರಿಹರ ತಾಲ್ಲೂಕು, ಕುಂಬಳೂರು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿ., ಕುಂಬಳೂರು ಇದರಲ್ಲಿ ಕಾರ್ಯಕಾರಿ ಸಮಿತಿ ನಿರ್ದೇಶಕರಾಗಿ ಹಾಗೂ ಜಿಲ್ಲಾ ಬ್ಯಾಂಕಿನ ಹುದ್ದೆಯಲ್ಲಿ ವೃತ್ತ ಮೇಲ್ವಿಚಾರಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಸದರಿ ಸಂದರ್ಭದಲ್ಲಿ ಅವರು ಎಸಗಿರುವ ಅವ್ಯವಹಾರದ ಬಗ್ಗೆ ಕ.ಸ.ಸ. ಕಾಯ್ದೆ 1959 ಕಲಂ 64 ರ ಅನ್ವಯ ವಿಚಾರಣೆ ನಡೆದಿರುತ್ತದೆ. ಅದನ್ನು ಆಧರಿಸಿ 1959ರ ಕ.ಸ.ಸ. ಕಾಯ್ದೆಗಳ ಕಲಂ 70ರ ಅಡಿಯಲ್ಲಿ ದಾವಾ ನಂ. 4/2003-04 ದಿನಾಂಕ: 10.8.2004 ರಂದು ಆದೇಶವಾಗಿರುತ್ತದೆ. ಸದರಿ ಬ್ಯಾಂಕಿನವರು ಕ.ಸ.ಸ. ನಿಯಮ 34(1)ರ ಪ್ರಕಾರ ಅಮಲ್ಜಾರಿ ಪ್ರಕರಣ ದಾಖಲಿಸಿರುತ್ತಾರೆ. ಸದರಿ ಪ್ರಕರಣವನ್ನು ಅಮಲ್ಜಾರಿಗಾಗಿ ಈ ಕೆಳಗೆ ಸಹಿ ಮಾಡಿರುವ ನನಗೆ ವಹಿಸಿಕೊಡಲ್ಪಟ್ಟಿರುತ್ತದೆ. ಸದರಿ ಅಮಲ್ಜಾರಿ ಪ್ರಕರಣದ ಅನ್ವಯ ಸದರಿ ಬ್ಯಾಂಕಿಗೆ ಪಾವತಿಸಬೇಕಾದ ಸಂಪೂರ್ಣ ಹಣವನ್ನು ನಿರ್ಣಯ ಬಾಕಿದಾರರಲ್ಲಿ ಒಬ್ಬರಾದ ಶ್ರೀ ಎ. ಮರಿಯಣ್ಣ ಇವರಿಗೆ ಸಂಪೂರ್ಣ ಹಣ ಪಾವತಿಸದೇ ಇದ್ದರೆ, ಸದರಿಯವರು ಸ್ಥಿರಾಸ್ತಿ ಜಪ್ತಿ ಮಾಡಲಾಗುವುದೆಂದು ತಿಳಿಸಲಾಗಿರುತ್ತದೆ. ಆದರೆ ಸದರಿಯವರಿಂದ ಬ್ಯಾಂಕಿಗೆ ಸಂಪೂರ್ಣ ಹಣ ರೂ. 10,06,250.00 + ಬಡ್ಡಿ + ಇತರೆ (ಹತ್ತು ಲಕ್ಷ ಆರು ಸಾವಿರದ ಎರಡುನೂರಾ ಐವತ್ತು ರೂಪಾಯಿ) ಗಳು ದಿನಾಂಕ: 31.5.2005 ರಂದು ಅಮಲ್ಜಾರಿ ಖಾತೆಯಲ್ಲಿದ್ದಂತೆ ಬಡ್ಡಿಯೊಡನೆ ಜಮಾ ಆಗದೇ ಬಾಕಿ ಇರುವುದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

1960ರ ಕರ್ನಾಟಕ ಸಹಕಾರ ಸಂಘಗಳ ನಿಯಮಗಳ ನಿಯಮ 38(2) ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಬಿ. ಸೇತೂಮಾಧವರಾವ್, ಮಾರಾಟಾಧಿಕಾರಿ, ಸಹಕಾರ ಸಂಘಗಳ ಸಹಾಯ ನಿಬಂಧಕರ ಕಛೇರಿ, ದಾವಣಗೆರೆ ಆದ ನಾನು ನಿರ್ಣಯ ಬಾಕಿದಾರರಾದ ಶ್ರೀ ಎ. ಮರಿಯಣ್ಣ ಇವರ ಈ ಕೆಳಕಂಡ ಸ್ಥಿರಾಸ್ತಿ ಜಪ್ತಿ ಮಾಡಿದ್ದೇನೆ. ಈ ಆದೇಶವನ್ನು ದಿನಾಂಕ: 31.5.2005 ರಂದು ನನ್ನ ಸ್ವಹಸ್ತ ಸಹಿಯೊಂದಿಗೆ ಹೊರಡಿಸಲಾಗಿದೆ.

**ಬಿ. ಸೇತೂಮಾಧವರಾವ್**
ಮಾರಾಟಾಧಿಕಾರಿಗಳು
ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ.

**ಷೆಡ್ಯೂಲ್**

| ತಾಲ್ಲೂಕು | ನಗರ/ಗ್ರಾಮ | ಆಸ್ತಿಯ ಹಕ್ಕುದಾರನ ಹೆಸರು | ಜಪ್ತಿಯಾದ ಸ್ಥಿರಾಸ್ತಿಗಳ ವಿವರ | ಅಂದಾಜು ವಿಸ್ತೀರ್ಣ | ಷರಾ |
|---|---|---|---|---|---|
| ದಾವಣಗೆರೆ | ದಾವಣಗೆರೆ | ಎ. ಮರಿಯಣ್ಣ ಬಿನ್ ಈರಣ್ಣ | ಡೋ.ನಂ. 607/13 ನಿಟುವಳ್ಳಿ ಶ್ರೀ ಮೌನೇಶ್ವರ ಬಡಾವಣೆ, ದಾವಣಗೆರೆ | 20 x 30 ಅಡಿಗಳು | |

ಪಿ.ಆರ್. 980

**ಬಿ. ಸೇತೂಮಾಧವರಾವ್**
ಮಾರಾಟಾಧಿಕಾರಿಗಳು
ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದಾವಣಗೆರೆ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-04, ಇವರ ನಡವಳಿಕೆಗಳು

**ಸನಿವ/ಯಾ.ಸ್ಥಿರೀಕರಣ/04-05/59, ದಿನಾಂಕ: 6ನೇ ಜುಲೈ 2005**

**ವಿಷಯ:** ಶ್ರೀ ಹೆಚ್.ವಿ. ನಾಗರಾಜ್ ಬಿನ್ ಹೆಚ್.ಎಂ. ವೀರಣ್ಣ ಮಲ್ಲೇಶ್ವರ ಟ್ರೇಡರ್ಸ್ ಬಳ್ಳಾರಿ ರಸ್ತೆ, ಚಳ್ಳಕೆರೆ ಇವರ ವ್ಯಾಪಾರ ಸಾಲದ ಬಾಕಿ ವಸೂಲಿ ಬಗ್ಗೆ ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿ ಬಹಿರಂಗ ಹರಾಜು ದಿನಾಂಕ: 30.3.2005.

**ಉಲ್ಲೇಖ:** ಸಿ.ಇ.ಪಿ. ನಂ. 1/2002-03 ದಿನಾಂಕ: 7.5.2002.

**ಪ್ರಸ್ತಾವನೆ:**

ಹೆಚ್.ವಿ. ನಾಗರಾಜ್, ಮೆ: ಮಲ್ಲೇಶ್ವರ ಟ್ರೇಡರ್ಸ್, ಬಳ್ಳಾರಿ ರೋಡ್, ಚಳ್ಳಕೆರೆ ಇವರು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ., ಚಿತ್ರದುರ್ಗ ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸಿದ ಕಾರಣ ಸದರಿ ಸುಸ್ತಿದಾರರ ಮೇಲೆ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಿಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ಧ ದಾವಾ ಸಂಖ್ಯೆ: ಎ(ಐ ಮತ್ತು ಎಂ)/ಡಿಪಿಎಸ್/ಡಿ7/1547/98-99 ದಿನಾಂಕ: 22.1.2002 ರಂತೆ ಡಿಕ್ರಿ ಪಡೆದು ಡಿಕ್ರಿದಾರ ಬ್ಯಾಂಕ್‌ನವರು ಸದರಿಯವರ ವಿರುದ್ಧ ಸಿ.ಇ.ಪಿ. ನಂ. 1:02-03 ರಂತೆ ಅಮಲ್ಜಾರಿ ಆದೇಶ ಪಡೆದು ಅಮಲ್ಜಾರಿ ಕಡತವನ್ನು ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳಂತೆ ಕ್ರಮವಿಟ್ಟು ಸುಸ್ತಿದಾರರಿಗೆ ಸೇರಿದ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ: 29.3.2005 ರಂದು ಬಹಿರಂಗ ಹರಾಜಿಗೊಳಪಡಿಸಿದ್ದು, ಸದರಿ ದಿನದಂದು ಶ್ರೀ ಕೆ.ಹೆಚ್. ತಿಪ್ಪೇಸ್ವಾಮಿ ಬಿನ್ ಹನುಮಂತಪ್ಪ, ರಹೀಮ್‌ನಗರ, ಚಳ್ಳಕೆರೆ ಇವರು ಅತಿ ಹೆಚ್ಚಿನ ಮೊತ್ತ ರೂ. 49,200.00 (ನಲವತ್ತೊಂಬತ್ತು ಸಾವಿರದ ಎರಡು ನೂರುಗಳು ಮಾತ್ರ) ಬಿಡ್ ಮಾಡಿರುತ್ತಾರೆ. ಅದರಂತೆ ಮಾರಾಟಾಧಿಕಾರಿಗಳು ಬಿಡ್ಡನ್ನು ಶ್ರೀ ಹೆಚ್.ಕೆ. ತಿಪ್ಪೇಸ್ವಾಮಿ ಬಿನ್ ಹನುಮಂತಪ್ಪ ರವರ ಹೆಸರಿಗೆ ನಿಲ್ಲಿಸಿ, ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸುಸ್ತಿದಾರರು ಸಹ ಹರಾಜಿನ ದಿನಾಂಕದಿಂದ 30 ದಿನಗಳೊಳಗೆ ಹಣ ಪಾವತಿಸಿರುವುದಿಲ್ಲ. ಅವರಿಂದ ಯಾವುದೇ ಪ್ರತಿಕ್ರಿಯೆ ಬರದೆಯಿರುವುದರಿಂದ ದಾಖಲಾತಿಗಳೊಂದಿಗೆ ಬ್ಯಾಂಕಿನ ಮಾರಾಟಾಧಿಕಾರಿ, ಚಿತ್ರದುರ್ಗ ಶಾಖೆ ಮಾರಾಟ ಸ್ಥಿರೀಕರಣಕ್ಕಾಗಿ ಪ್ರಸ್ತಾವನೆ ಸಲ್ಲಿಸಿದ್ದು, ಸದರಿ ದಾಖಲೆಗಳನ್ನು ಪರಿಶೀಲಿಸಿದಾಗ, ಮಾರಾಟದ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರನ್ವಯ ರೂ. 38(2)(ಡಿ) ರ ಪ್ರಕಾರ ಕ್ರಮ ಜರುಗಿಸಿರುವುದು ಕಂಡು ಬಂದಿರುತ್ತೆ. ಆದ್ದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸಹಕಾರ ಸಂಘಗಳ ನಿಯಮ 1960 ನಿಯಮ 38(6)(ಎ) ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ ನಿಯಮ 441, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು ಆದ ನಾನು, ಶ್ರೀ ಹೆಚ್.ವಿ. ನಾಗರಾಜ್ ಮೆ: ಮಲ್ಲೇಶ್ವರ್ ಟ್ರೇಡರ್ಸ್, ಚಳ್ಳಕೆರೆ ಇವರಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 29.3.2005 ರ ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಮೊತ್ತ ರೂ. 49,200.00 (ನಲವತ್ತೊಂಬತ್ತು ಸಾವಿರದ ಎರಡು ನೂರು ಮಾತ್ರ) ಕ್ಕೆ ಬಿಡ್ ಮಾಡಿದ್ದ ಶ್ರೀ ಕೆ.ಹೆಚ್. ತಿಪ್ಪೇಸ್ವಾಮಿ ಬಿನ್ ಹನುಮಂತಪ್ಪ, ರಹೀಮ್‌ನಗರ, ಚಳ್ಳಕೆರೆ ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

ಖಾಲಿ ನಿವೇಶನದ ಸಂಖ್ಯೆ 11, ಅಸೆಸ್‌ಮೆಂಟ್ ನಂ. 2823, ಖಾತಾ ನಂ. 2823, ನನ್ನಿವಾಳ ರೋಡ್, ಚಳ್ಳಕೆರೆ, ಇದರ ಒಟ್ಟು ವಿಸ್ತೀರ್ಣ 34'x45' ಅಳತೆ ಇರುತ್ತದೆ.

**ಚೆಕ್ಕುಬಂದಿ**

| | |
|---|---|
| ಪೂರ್ವಕ್ಕೆ | ನಿವೇಶನ ನಂ. 5 |
| ಪಶ್ಚಿಮಕ್ಕೆ | ಮುನಿಸಿಪಲ್ ರಸ್ತೆ |
| ಉತ್ತರಕ್ಕೆ | ನಿವೇಶನ ನಂ. 10 |
| ದಕ್ಷಿಣಕ್ಕೆ | ನಿವೇಶನ ನಂ. 12 |

ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಭಾಗಶಃ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 7.7.2005 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,

ಪಿ.ಆರ್. 981 ಹಾಗೂ ವಸೂಲಾಧಿಕಾರಿ,

ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ, ಬೆಂಗಳೂರು

## ನಗರಾಭಿವೃದ್ಧಿ ಇಲಾಖೆ

### ಅಧಿಸೂಚನೆ

**ಸಂಖ್ಯೆ: ನಅಇ 80 ನಯೋಸೇ 2005, ಬೆಂಗಳೂರು, ದಿನಾಂಕ: 4ನೇ ಜುಲೈ 2005**

ಘನ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮುಂದೆ ಸಲ್ಲಿಸಲ್ಪಟ್ಟಿದ್ದ ಅರ್ಜಿಗಳ ಸಂಖ್ಯೆ: 671 ರಿಂದ 677:2002 ರಲ್ಲಿ ಇದೇ ಘನ ನ್ಯಾಯ ಮಂಡಳಿಯು ದಿ: 23.7.2004 ರಂದು ನೀಡಿದ ಆದೇಶದನ್ವಯವಾಗಿ ನಗರ ಯೋಜನಾ ಇಲಾಖೆಯ ಕಿರಿಯ ನಗರ ಯೋಜಕರ ಜ್ಯೇಷ್ಠತೆಯನ್ನು ದಿನಾಂಕ: 1.1.2000 ರಂತೆ ಪರಿಷ್ಕರಿಸಲಾಯಿತು. ತತ್ಪರಿಣಾಮವಾಗಿ ಈ ಕೆಳಗೆ ಕಾಣಿಸಿರುವ

**ಶ್ರೀಯುತರುಗಳಾದ:**

1) ಎ. ರವೀಂದ್ರನಾಥ್

2) ಎಂ.ಎನ್. ಅಶೋಕ್
3) ಸಿ. ನಟರಾಜ್
4) ಎಂ.ಬಿ. ತಿಪ್ಪಣ್ಣ
5) ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ
6) ಎಂ.ಎನ್. ಕುಮಾರ್
7) ಬಿ. ಸುರೇಶ್
8) ಹೆಚ್.ಎ. ಹಫೀಜ್

ಇವರುಗಳಿಗೆ ನಗರ ಯೋಜನಾ ಸಹಾಯಕ ನಿರ್ದೇಶಕರೆಂದು, ಸರ್ಕಾರವು ನೀಡಿದ ಮುಂಬಡ್ತಿ ಪಡೆದ ದಿನಾಂಕವನ್ನು, ಅವರುಗಳಿಗಿಂತ ಕಿರಿಯರೆನಿಸಿದ ಶ್ರೀಯುತರುಗಳಾದ ಪಿ. ಸುನಿಲ್‌ಕುಮಾರ್ ಮತ್ತು ಎನ್.ವಿ. ಧನಂಜಯರೆಡ್ಡಿ, ಇವರುಗಳಿಗೆ ನಗರ ಯೋಜನಾ ಸಹಾಯಕ ನಿರ್ದೇಶಕರುಗಳೆಂದು ಸರ್ಕಾರದ ಅಧಿಸೂಚನೆ ಸಂ. ನಅಇ 80 ನಯೋಸೇ 2002 ದಿ: 16.9.2002 ರಲ್ಲಿ ನೀಡಿದ ಮುಂಬಡ್ತಿ ನೀಡಿದ ದಿನದಂತೆ ಕರ್ನಾಟಕ ನಾಗರೀಕ ಸೇವಾ (ಬಡ್ತಿ, ವೇತನ ಹಾಗೂ ಪಿಂಚಣಿಗಳ ಕ್ರಮಬದ್ಧತೆ) ಕಾಯ್ದೆ 1973ರ ಸೆಕ್ಷನ್ 3(1)ಬಿ ಮತ್ತು ಕರ್ನಾಟಕ ನಾಗರೀಕ ಸೇವಾ (ಬಡ್ತಿ, ವೇತನ ಹಾಗೂ ಪಿಂಚಣಿಗಳ ಕ್ರಮಬದ್ಧತೆ) ನಿಯಮಾವಳಿಗಳು ನಿಯಮ 1978ರ 2(1)ಪಿ. ಗಳ ಅಡಿಯಲ್ಲಿ ದಿ: 16.9.2002 ರಿಂದ ಪೂರ್ವಾನ್ವಯವಾಗಿ ನಿಗದಿಗೊಳಿಸಲಾಗಿದೆ.

ಈ ಮುಂಬಡ್ತಿಯಿಂದ ಪೂರ್ವಾನ್ವಯವಾಗಿ ದೊರೆಯುವ ಆರ್ಥಿಕ ಸೌಲಭ್ಯಕ್ಕೆ ಅರ್ಹತೆ ಹೊಂದಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 982

**ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

## ಅಧಿಸೂಚನೆ

### ಸಂಖ್ಯೆ: ಪಸಂಮೀ 126 ಮೀಇಇ 2005, ಬೆಂಗಳೂರು, ದಿನಾಂಕ: 25ನೇ ಜೂನ್ 2005

ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿರುವವರ, ಅದರಲ್ಲೂ ವಿಶೇಷವಾಗಿ, ಸಾಂಪ್ರಾದಾಯಿಕ ದೋಣಿಯನ್ನು ಉಪಯೋಗಿಸಿ ಮೀನುಗಾರಿಕೆ ಕೈಗೊಳ್ಳುವವರ ಹಿತಾಸಕ್ತಿಯನ್ನು ಕಾಪಾಡಲು ಮತ್ತು ಸಂಪತ್ತನ್ನು ಸಂರಕ್ಷಿಸುವ ಅವಶ್ಯಕತೆಯಿರುವುದೆಂದು ಕರ್ನಾಟಕ ಸರ್ಕಾರವು ಮನಗಂಡಿರುವ ಕಾರಣದಿಂದಾಗಿ;

ಮೀನುಗಾರಿಕೆ ಸಂಪತ್ತನ್ನು ಸಂರಕ್ಷಿಸುವ ಅವಶ್ಯಕತೆಯಿರುವುದರಿಂದ, ವೈಜ್ಞಾನಿಕ ರೀತಿಯಲ್ಲಿ ಮೀನುಗಾರಿಕೆ ಕೈಗೊಳ್ಳಲು ನಿಯಂತ್ರಿಸಬೇಕಾಗಿರುವುದಲ್ಲದೆ ಮೇಲಾಗಿ ಕಡಲಿನಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಅವಶ್ಯಕತೆ ಇದೆಯೆಂಬ ಕಾರಣದಿಂದಾಗಿ;

ಕಡಲಲ್ಲಿ ವಾತಾವರಣದ ವೈಪರೀತ್ಯದಿಂದಾಗಿ ಮೀನುಗಾರರ ಜೀವಕ್ಕೆ ಮತ್ತು ಆಸ್ತಿಗಳಿಗೆ ಸಂಭವಿಸುವ ಅಪಘಾತಗಳಿಂದ ಉಂಟಾಗಬಹುದಾದ ನಷ್ಟವನ್ನು ತಪ್ಪಿಸಬೇಕೆಂಬ ಕಾರಣದಿಂದಾಗಿ;

ಕರ್ನಾಟಕ ಕರಾವಳಿ ಮೀನುಗಾರಿಕೆ (ನಿಯಂತ್ರಣ) ಕಾಯಿದೆ 1986ರ ನಿಯಮ 3 ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ದಿಸೆಯಲ್ಲಿ ಈ ಹಿಂದೆ ಹೊರಡಿಸಲಾಗಿದ್ದ ಅಧಿಸೂಚನೆಗಳ ಸಂಖ್ಯೆ ಎಹೆಚ್‌ಎಫ್ 107 ಎಸ್‌ಎಫ್‌ಎಂ 98, ದಿನಾಂಕ: 9.10.2000 ಮತ್ತು ಸಂಖ್ಯೆ: ಪಸಂಮೀ 148 ಮೀಇಇ 2004 ದಿನಾಂಕ: 4.5.2005 ನ್ನು ರದ್ದುಗೊಳಿಸಿ ಕರ್ನಾಟಕದ ಕರಾವಳಿಯಲ್ಲಿ ಯಾವುದೇ ಬಲೆಗಳನ್ನು/ಸಾಧನಗಳನ್ನು ಉಪಯೋಗಿಸಿ ಮೀನುಗಾರಿಕೆಗಾಗಿ ಯಾಂತ್ರೀಕ ದೋಣಿಗಳ ಬಳಕೆಯನ್ನು ಕೆಳಕಂಡಂತೆ ನಿಷೇಧಿಸಿದೆ.

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ನಿಷೇಧಿತ ಅವಧಿಯು ಜೂನ್ 15 ರಿಂದ ಪ್ರಾರಂಭಗೊಂಡು ಆಗಸ್ಟ್ 10 ರವರೆಗೆ (ಎರಡು ದಿನಗಳು ಸೇರಿ) ಪ್ರತಿವರ್ಷ ಒಟ್ಟು 57 ದಿವಸಗಳ ಅವಧಿಗೆ ಜಾರಿಯಲ್ಲಿರುತ್ತದೆ. ಆದಾಗ್ಯೂ, ಈ ಎರಡು ಜಿಲ್ಲೆಗಳಲ್ಲಿನ ಸದರಿ ನಿಷೇಧಿತ ಅವಧಿಯಲ್ಲಿ ಆಳ ಸಮುದ್ರದ ಬಹುದಿನಗಳ ಮೀನುಗಾರಿಕೆ ದೋಣಿಗಳು (ಮಲ್ಟಿಡೇ ಡೀಪ್ ಸೀ ಟ್ರಾಲರ್ಸ್) ಆಗಸ್ಟ್ 3 ರಿಂದ ಕರಾವಳಿ ಮೀನುಗಾರಿಕೆಗಾಗಿ ತೆರಳಲು ಸದರಿ ದೋಣಿಗಳು ಹಿಡಿದ ಮೀನನ್ನು ಇಳಿಸಲು ಆಗಸ್ಟ್ 10ರ ನಂತರವೇ ಬಂದರುಗಳಿಗೆ ಹಿಂದಿರುಗತಕ್ಕದ್ದೆಂಬ ನಿಬಂಧನೆಯ ಮೇರೆಗೆ ಅನುಮತಿಸಲಾಗಿದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ನಿಷೇಧಿತ ಅವಧಿಯು ಜೂನ್ 15 ರಿಂದ ಪ್ರಾರಂಭಗೊಂಡು ಜುಲೈ 29 ರವರೆಗೆ (ಎರಡು ದಿನಗಳು ಸೇರಿ) ಪ್ರತಿವರ್ಷ ಒಟ್ಟು 45 ದಿವಸಗಳ ಅವಧಿಗೆ ಜಾರಿಯಲ್ಲಿರುತ್ತದೆ.

ಆದಾಗ್ಯೂ, ಮೇಲ್ಕಾಣಿಸಿದ ನಿಷೇಧಿತ ಅವಧಿಗಳಲ್ಲಿ ಕರ್ನಾಟಕದ ಎಲ್ಲಾ 3 ಕರಾವಳಿ ಜಿಲ್ಲೆಗಳಲ್ಲಿ ಕೇವಲ ದೋಣಿಯನ್ನು ಸಾಗಿಸುವ ಉದ್ದೇಶಕ್ಕಾಗಿಯೇ 25 ಅಶ್ವಶಕ್ತಿಯವರೆಗಿನ ಸಾಮರ್ಥ್ಯದ ಐ.ಜೆ.ಎಂ. ಅಥವಾ ಐ.ಜೆ.ಎಂ. ಯಂತ್ರವನ್ನು ಅಳವಡಿಸಿದ ಅಥವಾ ಅಳವಡಿಸದಿರುವ ಸಾಂಪ್ರಾದಾಯಿಕ ಮೀನುಗಾರಿಕೆ ದೋಣಿಗಳು ಕರಾವಳಿ ಮೀನುಗಾರಿಕೆಯನ್ನು ಕೈಗೊಳ್ಳಲು ಅನುಮತಿಸಿದೆ.

ಸರ್ಕಾರದ ಈ ಆದೇಶವನ್ನು ಉಲ್ಲಂಘಿಸುವ ಮೀನುಗಾರಿಕೆ ದೋಣಿಗಳು ಮತ್ತು ಮೀನುಗಾರರು ಮೇಲ್ಕಾಣಿಸಿದ ಕಾಯಿದೆಯಲ್ಲಿ ವಿಧಿಸಲಾಗಿರುವ ದಂಡನೆಗಳಿಗೆ ಹೊಣೆಯಾಗುವುದಲ್ಲದೆ ಒಂದು ವರ್ಷದ ಅವಧಿಗೆ ರಾಜ್ಯ ಮಾರಾಟಕರ ರಹಿತ ಡೀಸೆಲ್ ಪಡೆಯಲು ಮತ್ತು ಕೇಂದ್ರ ಅಬ್ಕಾರಿ ತೆರಿಗೆಯ ಮರುಪಾವತಿಯನ್ನು ಪಡೆಯಲು ಅನರ್ಹರಾಗುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 983

**ಡಿ. ಕಮಲಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂಖ್ಯೆ: ಕೆ.ಎಸ್.ಎ:ಸಿಆರ್:3/05-06, ದಿನಾಂಕ: 26ನೇ ಜೂನ್ 2005**

ಬೆಂಗಳೂರು ನಗರ ಕಾರ್ಪೋರೇಷನ್ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಪ್ರಕಾರ ಹಾಗೂ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ' ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

### ಷೆಡ್ಯೂಲ್

ಬೆಂಗಳೂರು ನಗರ ಯಶವಂತಪುರ ಹೋಬಳಿ ಪೀಣ್ಯ 3ನೇ ಹಂತದಲ್ಲಿರುವ ಸಿದ್ದಾರ್ಥನಗರ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕು ಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಸಿದ್ದಾರ್ಥನಗರ ಕೊಳಚೆ ಪ್ರದೇಶ, ಪೀಣ್ಯ 3ನೇ ಹಂತ, ಯಶವಂತಪುರ ಹೋಬಳಿ, ಬೆಂಗಳೂರು | ಕೆ.ಐ.ಎ.ಡಿ.ಬಿ. ಮತ್ತು ಕೆ.ಎಸ್.ಎಸ್. ಐ.ಡಿ.ಸಿ. | 88 ಕೆ.ಎಸ್.ಎಸ್. ಐ.ಡಿ.ಸಿ. ಶೆಡ್ ನಂ. ಪಿ.29, 30, 31 ವಿ-89ಎ | 0.21 ಗುಂಟೆ | ಖಾಲಿ ಜಾಗ ಬಿ.ಜಿ.ಕೆ. ಗಡಿ | ಮೋರಿ | ರಸ್ತೆ | ರಸ್ತೆ |

**ಎಂ.ಎ. ಸಾಧಿಕ್**
ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು

ಪಿ.ಆರ್. 984

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

### ಪ್ರಿಲಿಮಿನರಿ ಅಧಿಸೂಚನೆ

**ಸಂಖ್ಯೆ: ಕೆ.ಎಸ್.ಎ:ಸಿಆರ್:4/05-06, ದಿನಾಂಕ: 15ನೇ ಜೂನ್ 2005**

ಬೆಂಗಳೂರು ನಗರ ಕಾರ್ಪೋರೇಷನ್ ವ್ಯಾಪ್ತಿಯ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ ಇರುವ ಮನೆಗಳು ಒತ್ತೊತ್ತಾಗಿದ್ದು ಜನರು ಸಾಮಾನ್ಯ ಸ್ಥಿತಿಯಲ್ಲಿ ವಾಸಿಸಲು ಅನಾನುಕೂಲ ಉಂಟಾಗಿದ್ದು, ಹಾಲಿ ಇರುವ ಗುಡಿಸಲುಗಳ ದುರಸ್ಥಿ ಇಲ್ಲದೇ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಅನಾರೋಗ್ಯಕರ ವಾತಾವರಣ ಉಂಟಾಗಿರುವುದನ್ನು ಅಧಿಕಾರಿಗಳು ವರದಿ ಮಾಡಿರುತ್ತಾರೆ. ಈ ಪ್ರದೇಶವು ಜನಸಂದಣಿಯಿಂದ ಕೂಡಿದ್ದು, ಮಾಲಿನ್ಯ ಮತ್ತು ಅನಾರೋಗ್ಯಕರ ವಾತಾವರಣದಿಂದ ಕೂಡಿರುವುದರಿಂದ ಈ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಸೆಕ್ಷನ್ 3 ರಡಿಯಲ್ಲಿ ಕೊಳಚೆ ಪ್ರದೇಶವೆಂದು ಘೋಷಿಸುವುದು ಅವಶ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಈ ಕೆಳ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಪ್ರಕಾರ ಹಾಗೂ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು ರವರು 'ಕೊಳಚೆ ಪ್ರದೇಶ' ವೆಂದು ಘೋಷಿಸಲು ಉದ್ದೇಶಿಸಿರುತ್ತಾರೆ.

ಮೇಲ್ಕಂಡ ಈ ಕ್ರಮದ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ, ಕಾರ್ಯದರ್ಶಿಗಳು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ಶೇಷಾದ್ರಿಪುರ, ಬೆಂಗಳೂರು-20 ರವರಿಗೆ ಲಿಖಿತವಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ (15) ಹದಿನೈದು ದಿವಸಗಳ ಕಾಲಾವಕಾಶ ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ.

### ಷೆಡ್ಯೂಲ್

ಬೆಂಗಳೂರು ನಗರ ಯಲಹಂಕ ಹೋಬಳಿ, ವ್ಯಾಪ್ತಿಯಲ್ಲಿರುವ ಗೊರಗುಂಟೆ ಪಾಳ್ಯ, ಮುನೇಶ್ವರ ದೇವಾಲಯ ಮುಂಭಾಗದಲ್ಲಿರುವ ಕೊಳಚೆ ಪ್ರದೇಶದ ಚಕ್ಕುಬಂದಿ ಮತ್ತು ಹದ್ದುಬಸ್ತು ತಃಖ್ತೆ.

| ಕ್ರ. ಸಂ. | ಕೊಳಚೆ ಪ್ರದೇಶದ ಹೆಸರು ಮತ್ತು ಸ್ಥಳ | ಕೊಳಚೆ ಪ್ರದೇಶದಲ್ಲಿರುವ ಜಮೀನಿನ ಮಾಲೀಕರ ಹೆಸರು | ಸರ್ವೆ ನಂ. | ವಿಸ್ತೀರ್ಣ | ಚೆಕ್ಕು ಬಂದಿಗಳು | | | |
|---|---|---|---|---|---|---|---|---|
| | | | | | ಪೂರ್ವ | ಪಶ್ಚಿಮ | ಉತ್ತರ | ದಕ್ಷಿಣ |
| 1 | ಗೊರಗುಂಟೆ ಪಾಳ್ಯ, ಮುನೇಶ್ವರ ದೇವಾಲಯ ಮುಂಭಾಗದ ಕೊಳಚೆ ಪ್ರದೇಶ, ಯಲಹಂಕ ಹೋಬಳಿ, ಬೆಂಗಳೂರು | ಟ್ರಸ್ಟ್ ಬೋರ್ಡ್ (ಬಿ.ಡಿ.ಎ) | 10/7 | 0.08 ಗುಂಟೆ | ಇದೇ ನಿವೇಶನದ ಖಾಲಿ ಜಾಗ ಮತ್ತು ಖಾಸಗಿ ಕಾರ್ಖಾನೆ | ರಸ್ತೆ | ಖಾಸಗಿ ಖಾಲಿ ಜಾಗ | ರಸ್ತೆ |

ಎಂ.ಎ. ಸಾಧಿಕ್

ಪಿ.ಆರ್. 985 ಜಿಲ್ಲಾಧಿಕಾರಿಗಳು,

ಬೆಂಗಳೂರು ಜಿಲ್ಲೆ, ಬೆಂಗಳೂರು

## ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಅಧಿಕಾರಿಗಳವರ ಕಛೇರಿ, ಬೆಳಗಾವಿ

## ಪ್ರಕಟಣೆ

**ಸಂಖ್ಯೆ: ಬಿಸಿಎಂ:5:ಕಾಪತ:ಸಿಆರ್:13:2005-06, ದಿನಾಂಕ: 22ನೇ ಜೂನ್ 2005**

**ವಿಷಯ:** 2005-06ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ತರಬೇತಿ ನೀಡುವ ಕುರಿತು.

2005-06ನೇ ಸಾಲಿನಲ್ಲಿ ಬೆಳಗಾವಿ ಜಿಲ್ಲೆಯಲ್ಲಿನ ಹಿಂದುಳಿದ ವರ್ಗಗಳ ಕಾನೂನು ಪದವೀಧರರಿಗೆ ಈ ಇಲಾಖೆವತಿಯಿಂದ ತರಬೇತಿ ನೀಡಲಾಗುತ್ತಿದೆ. ಆಸಕ್ತ ಹಾಗೂ ಅರ್ಹ ಹಿಂದುಳಿದ ವರ್ಗಗಳಿಗೆ ಸೇರಿದ ಕಾನೂನು ಪದವೀಧರರು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಅರ್ಜಿಗಳನ್ನು ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಅಧಿಕಾರಿಗಳು, ಬೆಳಗಾವಿ ಇವರಿಗೆ ದಿನಾಂಕ: 30.7.2005 ರೊಳಗಾಗಿ ಸಲ್ಲಿಸಬಹುದಾಗಿದೆ.

### ಅರ್ಹತೆ ನಿಯಮಗಳು ಹಾಗೂ ತರಬೇತಿಯ ವಿವರಗಳು

1. ತರಬೇತಿಯನ್ನು ಬೆಳಗಾವಿ ಜಿಲ್ಲೆಯಲ್ಲಿಯೇ ನೀಡಲಾಗುವುದು.
2. ಬೆಳಗಾವಿ ಜಿಲ್ಲೆಯಿಂದ ಒಟ್ಟು ಇಬ್ಬರು (2) ಅಭ್ಯರ್ಥಿಗಳು ಮಾತ್ರ ತರಬೇತಿಗೆ ಆಯ್ಕೆ ಮಾಡಲಾಗುವುದು.
3. ಸರಕಾರದ ಆದೇಶ ಸಂ: ಎಸ್‌ಡಬ್ಲ್ಯೂಡಿ:150 ಬಿಸಿಎಂ:94, ದಿನಾಂಕ: 17.9.94 ರಲ್ಲಿ ವರ್ಗೀಕರಣ ಮಾಡಿರುವ ಪ್ರಕಾರ ವರ್ಗ-I, II(ಎ), II(ಬಿ), III(ಎ), III(ಬಿ)ಗೆ ಸೇರಿದ ಅಭ್ಯರ್ಥಿಗಳಾಗಿರಬೇಕು ಮತ್ತು ಸರಕಾರದ ಆದೇಶ ಸಂ: ಎಸ್‌ಡಬ್ಲ್ಯೂಡಿ:222:ಬಿಸಿಎ:91: ದಿ: 26.9.94ರ ಆದೇಶದಲ್ಲಿ ಸರಕಾರವು ನಿಗದಿಪಡಿಸಿರುವ ನಮೂನೆಗಳಲ್ಲಿ ಜಾತಿ:ಆದಾಯದ ಬಗ್ಗೆ ತಹಶೀಲ್ದಾರರಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸಬೇಕು. (ವಾರ್ಷಿಕ ಆದಾಯ ರೂ. 15,000.00 ಮೀರಬಾರದು)
4. ಬೆಳಗಾವಿ ಜಿಲ್ಲೆಯಲ್ಲಿ ವಾಸ ಮಾಡುತ್ತಿರುವ ಅಭ್ಯರ್ಥಿಗಳು ಮಾತ್ರ ಅರ್ಜಿ ಹಾಕಿಕೊಳ್ಳಲು ಅರ್ಹರಾಗಿರುತ್ತಾರೆ.
5. ತರಬೇತಿ ಅವಧಿಯು ನಾಲ್ಕು (4) ವರ್ಷವಾಗಿದ್ದು ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಪ್ರತಿ ಮಾಹೆ ರೂ. 1000.00 (ರೂ. ಒಂದು ಸಾವಿರ ಮಾತ್ರ) ತರಬೇತಿ ಭತ್ಯೆ (ಸ್ಟೈಫಂಡ್) ಮಂಜೂರು ಮಾಡಲಾಗುವುದು.
6. ಅಭ್ಯರ್ಥಿಗಳನ್ನು ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯಿಂದ ಸಂದರ್ಶನ ನಡೆಸಿ ಆಯ್ಕೆ ಮಾಡಲಾಗುವುದು.
7. ಅಭ್ಯರ್ಥಿಗಳು ಅರ್ಜಿ ಜೊತೆಗೆ ಅವರ ವಯಸ್ಸನ್ನು ದೃಢೀಕರಿಸುವ ಎಸ್.ಎಸ್.ಎಲ್.ಸಿ. ಯ ಅಂಕಪಟ್ಟಿ ಪದವಿ ಹಾಗೂ ಕಾನೂನು ಪದವಿಯಲ್ಲಿ ಪಡೆದ ಅಂಕಪಟ್ಟಿಗಳ ಪ್ರಮಾಣ ಪತ್ರದ ದೃಢೀಕೃತ ಪತ್ರವನ್ನು ಮತ್ತು ವಕೀಲರು ಎಂದು ಪ್ರಾಕ್ಟೀಸ್ ಮಾಡುತ್ತಿರುವ ಬಗ್ಗೆ ಪ್ರಮಾಣ ಪತ್ರಗಳನ್ನು ಲಗತ್ತಿಸತಕ್ಕದ್ದು.
8. ಅಭ್ಯರ್ಥಿಗಳ ವಯಸ್ಸು ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕಕ್ಕೆ 30 ವರ್ಷಗಳು ಮೀರಬಾರದು. ಪ್ರವರ್ಗ-1ರ ಅಭ್ಯರ್ಥಿಗಳಿಗೆ ಗರಿಷ್ಠ ವಯೋಮಿತಿ 31 ವರ್ಷಗಳು.
9. ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್:ಸರಕಾರಿ ವಕೀಲರು ಅಥವಾ ಕನಿಷ್ಠ 20 ವರ್ಷಗಳ ವಕೀಲಿ ವೃತ್ತಿಯಲ್ಲಿ ಅನುಭವವುಳ್ಳ ಯಾವುದೇ ವಕೀಲರ ಅಧೀನದಲ್ಲಿ ತರಬೇತಿಗೆ ನಿಯೋಜಿಸಲಾಗುವುದು.
10. ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ಹೆಸರನ್ನು ನೋಂದಾಯಿಸಿರಬೇಕು. ನೋಂದಣಿಯಾಗಿದ್ದಲ್ಲಿ ತರಬೇತಿಗೆ ಆಯ್ಕೆಯಾದರೆ ಅಂತಹ ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ತಮ್ಮ ನೋಂದಣಿ ಮಾಡಿಸಿದ ಹೊರತು ಸ್ಟೈಫಂಡ್ ಹಣವನ್ನು ಪಾವತಿಸಲಾಗುವುದಿಲ್ಲ.
11. ಅಭ್ಯರ್ಥಿಯು ತರಬೇತಿಗೆ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಿಂದ ಎರಡು (2) ವರ್ಷದೊಳಗಾಗಿ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.
12. ತರಬೇತಿಯ ಅವಧಿಯು (4) ನಾಲ್ಕು ವರ್ಷಗಳದ್ದಾಗಿದ್ದು ತರಬೇತಿಯನ್ನು ಮಧ್ಯದಲ್ಲಿ ಬಿಡಕೂಡದು. ತರಬೇತಿಯ ಅವಧಿಯಲ್ಲಿ ರಾಜ್ಯ ಅಥವಾ ಕೇಂದ್ರ ಸರಕಾರದ ಸೇವೆಗೆ ಸೇರಿದಲ್ಲಿ ಈ ಷರತ್ತು ಅನ್ವಯಿಸುವುದಿಲ್ಲ.
13. ಅಭ್ಯರ್ಥಿಗಳು ಸುಳ್ಳು ಮಾಹಿತಿ ಸಲ್ಲಿಸಿದಲ್ಲಿ ಅವರ ವಿರುದ್ಧ ಕಾನೂನಿನ ಪ್ರಕಾರ ಕ್ರಮ ಜರುಗಿಸಲಾಗುವುದು. ಅಲ್ಲದೆ ಅವರಿಗೆ ನೀಡಲಾದ ತರಬೇತಿ ಭತ್ಯೆಯನ್ನು ಶೇಕಡ 10 ರಷ್ಟು ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು. ಯಾವುದೇ ಹಣ ಬಾಕಿ ಉಳಿದಲ್ಲಿ ಭೂ ಕಂದಾಯ ಬಾಕಿ ವಸೂಲಿ ಮಾಡುವ ರೀತಿಯಲ್ಲಿ ಇಂತಹ ಹಣವನ್ನು ವಸೂಲಿ ಮಾಡಲಾಗುವುದು.
14. ಸದಸ್ಯ ಕಾರ್ಯದರ್ಶಿಯವರು ಸ್ವೀಕರಿಸಿದ ಅರ್ಜಿಗಳನ್ನು ಪರಿಶೀಲನೆ ಮಾಡಿ ಅಪೂರ್ಣಗೊಂಡಿರುವ ಹಾಗೂ ಕೇಳಿರುವ ಮಾಹಿತಿಯನ್ನು ಅರ್ಜಿಯ ಸಂಗಡ ಒದಗಿಸದ ಮತ್ತು ಅವಧಿ ಮೀರಿ ಬಂದಂತಹ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕೃತ ಮಾಡಲಾಗುವುದು.

ಅರ್ಜಿ ಮತ್ತು ಆಸಕ್ತಿಯುಳ್ಳವರು ಈ ಪ್ರಕಟಣೆಯೊಂದಿಗೆ ಪ್ರಕಟಿಸಲಾದ ಅರ್ಜಿ ನಮೂನೆಯಲ್ಲಿಯೇ ದಿನಾಂಕ: 30.7.2005 ರೊಳಗಾಗಿ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಬೆಳಗಾವಿ ಇವರಿಗೆ ತಲುಪುವಂತೆ ಕಳುಹಿಸಬೇಕು. ಹೆಚ್ಚಿನ ಮಾಹಿತಿಗಾಗಿ ಮತ್ತು ಅರ್ಜಿ ನಮೂನೆಗಳಿಗೆ ಜಿಲ್ಲಾ ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಅಧಿಕಾರಿಗಳವರ ಕಛೇರಿ ಡಿ.ಸಿ. ಕಾಂಪೌಂಡ್ ಬೆಳಗಾವಿ ಇವರನ್ನು ಕಛೇರಿಯ ವೇಳೆಯಲ್ಲಿ ಸಂಪರ್ಕಿಸಬಹುದು.

ಸದಸ್ಯ-ಕಾರ್ಯದರ್ಶಿಗಳು
ಮತ್ತು ಜಿಲ್ಲಾ ಅಧಿಕಾರಿಗಳು,
ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಳಗಾವಿ.

ಪಿ.ಆರ್. 986

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪ್ರಕರಣ ಸಂಖ್ಯೆ: ಕಾನಪ:ಪ್ರ:ಎಫ್-26/2005, ದಿನಾಂಕ: 28ನೇ ಜೂನ್ 2005**

**ಅರ್ಜಿದಾರರು:**
1) ಎ. ರಾಜಮ್ಮ
2) ಜಾಂಬವತಿ
ಮಲಕಮೋಡು, ಸೆಟ್ಟೂರ್ ಮಂಡಲ್

**ವಿರುದ್ಧ**

**ಪ್ರತಿವಾದಿಗಳು:**
1) ಎಸ್. ನರಸಿಂಹಮೂರ್ತಿ
ಬಸ್ ಮಾಲೀಕರು, ಪಾವಗಡ
2) ಓರಿಯಂಟಲ್ ಇನ್‌ಶ್ಯೂರೆನ್ಸ್ ಕಂ. ಲಿ.
ಚಿತ್ರದುರ್ಗ

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ ಎ. ರಾಜಮ್ಮ, ಜಾಂಬವತಿ ಇವರು, ತಾವು ಮೃತ ಅನಂತಶಯನ ಇವರ ಹೆಂಡತಿ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಅನಂತಶಯನ ಇವರು ಒಂದನೇ ಪ್ರತಿವಾದಿಗಳಾದ ಎಸ್. ನರಸಿಂಹಮೂರ್ತಿ ಇವರಲ್ಲಿ ಬಸ್ ಕಂಡಕ್ಟರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 987

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ. ಉಪ ವಿಭಾಗ-1, ಬೆಂದೂರ್‌ವೆಲ್‌ವೃತ್ತ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ

**ಸಂಖ್ಯೆ: ಡಬ್ಲ್ಯುಸಿಎ:ಸಿಆರ್:27/2005, ದಿನಾಂಕ: 2ನೇ ಜುಲೈ 2005**

**ಅರ್ಜಿದಾರರು:**
1. ಶ್ರೀಮತಿ ತಾಹಿರಾ
2. ಫೆಯಿಜಾ
3. ಮುರ್‌ಫಿಕ್
4. ಸಾರಮ್ಮ
ಅಡ್ಡಾರು, ಕಣ್ಣೂರು, ಮಂಗಳೂರು

**ವಿರುದ್ಧ**

**ಪ್ರತಿವಾದಿಗಳು:**
1. ಶ್ರೀ ಮಹಮ್ಮದ್ ಬಶೀರ್ ಬಿನ್ ಎಂ.
ಇಸ್ಮಾಯಿಲ್‌ಸಾಬ್, ಹಿಂದೂಸ್ತಾನ್ ಏಜೆನ್ಸಿ,
ಸಂತೆಕಟ್ಟೆ, ಉಡುಪಿ ಜಿಲ್ಲೆ
2. ದಿ ನ್ಯಾಶನಲ್ ಇನ್‌ಶ್ಯೂರೆನ್ಸ್ ಕಂ. ಲಿ.
ಶ್ರೀ ರಾಮ್ ಸ್ಟೆಟ್ ಆಫೀಸ್
ಪ್ರಕಾಶಮ್ ರಸ್ತೆ, ಟಿ. ನಗರ, ಚೆನ್ನೈ.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ:ಶ್ರೀ ತಾಹಿರಾ ಇವರು ತಮ್ಮ ಗಂಡನಾದ ಶ್ರೀ ಕರೀಂ ಇವರು 1ನೇ ಪ್ರತಿವಾದಿಗಳಾದ ಶ್ರೀ ಮಹಮ್ಮದ್ ಬಶೀರ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 14.4.2005 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿದ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮ್ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

**ಎಸ್.ಸಿ. ರಾಮಚಂದ್ರ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ದ.ಕ. ಉಪ ವಿಭಾಗ-1, ಮಂಗಳೂರು.

ಪಿ.ಆರ್. 988

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಪ್ರಕರಣ ಸಂಖ್ಯೆ: ಕಾಪಕ:ಕಸ:32/2005, ದಿನಾಂಕ: 8ನೇ ಜುಲೈ 2005**

**ಅರ್ಜಿದಾರರು:**

1. ತಿಪ್ಪೇಸ್ವಾಮಿ ಬಿನ್ ವೆಂಕಟೇಶಪ್ಪ
   ಕೆ:ಆ ಶಿವಗಂಗಾ ಫಾರಂ ನರ್ಸರಿ
   ಪುರಲಿ ಗ್ರಾಮ, ಶಿವಮೊಗ್ಗ
2. ಮಂಜ ಬಿನ್ ತಿಪ್ಪೇಸ್ವಾಮಿ
3. ಲಕ್ಷ್ಮಿ ಬಿನ್ ತಿಪ್ಪೇಸ್ವಾಮಿ

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಸಂಜಯ್ ನರೋನ
   ನಲ್ಲಿಗುಡ್ಡೇ ಕಲ್ಲು ಕ್ವಾರಿ
   ಐಕಳಗ್ರಾಮ, ಮಂಗಳೂರು ಅಂಚೆ

**ಪ್ರಕಟಣೆ**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದು ಏನೆಂದರೆ, ಶ್ರೀಮತಿ ಲೀಲಾ ಯಾನೆ ಕಮಲ ರವರು ಪ್ರತಿವಾದಿಯವರಲ್ಲಿ ಕಾರ್ಮಿಕರಾಗಿ ಕೆಲಸದ ಮೇಲೆ ಇದ್ದಾಗ 3.3.04 ರಂದು ಅಪಘಾತಗೊಂಡಿರುವುದರಿಂದ ಮೃತರಾಗಿರುತ್ತಾರೆ.

ಮೃತರು ಪ್ರತಿವಾದಿಯವರ ಕಡೆ ಕೆಲಸದಲ್ಲಿರುವ ಕಾರಣ ಪರಿಹಾರ ಹಣಕ್ಕಾಗಿ ಅರ್ಜಿದಾರರು ದಿನಾಂಕ: 14.6.05 ರಂದು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾನೆ. ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದು ಏನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

ಪಿ.ಆರ್. 989

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-1, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ:ಎಫ್:13:2005**

**ಅರ್ಜಿದಾರರು:**
1. ಶ್ರೀಮತಿ ಶಶಿಕಲಾ ಕೋಂ ಸುಬ್ಬರಾಯ, 40 ವರ್ಷ
2. ಕು: ಜ್ಯೋತಿ ಬಿನ್ ಸುಬ್ಬರಾಯ, 21 ವರ್ಷ
3. ರಾಜೇಂದ್ರ ಬಿನ್ ಸುಬ್ಬರಾಯ, 19 ವರ್ಷ

**ವಿರುದ್ಧ**

**ಪ್ರತಿವಾದಿಗಳು:** ಶ್ರೀ ಸುಬ್ರಮಣ್ಯ ಎಸ್ ಡೋಂಗ್ರೆ ಬಿನ್ ಶ್ರೀನಿವಾಸ ಹರಿ ಡೋಂಗ್ರೆ
ವಾಸ: ಗೋಚುವಳ್ಳಿ ವೈಕುಂಠಪುರ ಗ್ರಾಮ, ಶೃಂಗೇರಿ ತಾ: ಚಿಕ್ಕಮಗಳೂರು ಜಿಲ್ಲೆ

**ಪ್ರಕಟಣೆ**

ಸುಬ್ಬರಾಯ ಬಿನ್ ಕಾಡಯ್ಯ ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 8.6.2005 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**
ಕಾರ್ಮಿಕ ಪರಿಹಾರ ಆಯುಕ್ತರು
ಹಾಗೂ ಕಾರ್ಮಿಕ ಅಧಿಕಾರಿ ಉಪವಿಭಾಗ-1, ಚಿಕ್ಕಮಗಳೂರು.

ಪಿ.ಆರ್. 990

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪ ವಿಭಾಗ-1, ಚಿಕ್ಕಮಗಳೂರು ಜಿಲ್ಲೆ**

**ಸಂಖ್ಯೆ: ಕಾಪಕಾ:ಎಫ್:10:2005**

**ಅರ್ಜಿದಾರರು:**
1. ಶ್ರೀಮತಿ ಹೆಚ್.ಎಸ್. ಸುಮಿತ್ರ ಕೋಂ ಶ್ರೀ ಬಿ.ಸಿ. ಮಾಧು, 50 ವರ್ಷ
2. ಕು: ಬಿ.ಎಂ. ಪಲ್ಲವಿ ಬಿನ್ ದಿ: ಬಿ.ಸಿ. ಮಾಧು, 18 ವರ್ಷ
3. ಶ್ರೀಮತಿ ರಾಮಮ್ಮ ಕೋಂ ಚನ್ನೇಗೌಡ, 80 ವರ್ಷ

ವಾಸ: ಮನೆ ನಂ. 36, ಎಂಐಜಿ-1, 2ನೇ ಹಂತ, ಗೃಹಮಂಡಳಿ, ಚಿಕ್ಕಮಗಳೂರು.

**ವಿರುದ್ಧ**

**ಪ್ರತಿವಾದಿಗಳು:** ವಿಭಾಗೀಯ ನಿಯಂತ್ರಣಾಧಿಕಾರಿಗಳು,
ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಚಿಕ್ಕಮಗಳೂರು

**ಪ್ರಕಟಣೆ**

ಬಿ.ಸಿ. ಮಾಧು ಎಂಬುವವರು ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 29.1.2005 ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೆ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಆರ್.ಬಿ. ಬಾಗೇವಾಡಿ**

ಪಿ.ಆರ್. 991

ಕಾರ್ಮಿಕ ಪರಿಹಾರ ಆಯುಕ್ತರು

ಹಾಗೂ ಕಾರ್ಮಿಕ ಅಧಿಕಾರಿ ಉಪವಿಭಾಗ-1, ಚಿಕ್ಕಮಗಳೂರು.

## ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ನಿರ್ದೇಶಕರ ನಡುವಳಿ

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ ಕನಕಪುರ ತಾಲ್ಲೂಕು, ಕಬ್ಬೆಹಳ್ಳಿ ಗ್ರಾಮದಲ್ಲಿ ಮಲ್ಟಿ ಕಲರ್ ಶಿಲೆಗಾಗಿ ಎಂ. ಗೋವಿಂದರಾಜುರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 404ರ ಗುತ್ತಿಗೆಯನ್ನು ಪುನರ್ ಸ್ಥಾಪಿಸಿರುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಪತ್ರ ಸಂಖ್ಯೆ: ಸಿಐ:87:ಎಂ.ಎಂ.ಎನ್. 2005 ದಿನಾಂಕ: 18.6.2005.

2) ಕಛೇರಿ ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:404:2004-05:16723, ದಿನಾಂಕ: 18.2.2005.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು ಕೆಬ್ಬೆಹಳ್ಳಿ ಗ್ರಾಮದ ಸರ್ವೆ ನಂ. 201 ರಲ್ಲಿ ಶ್ರೀ ಎಂ. ಗೋವಿಂದರಾಜು ರವರಿಗೆ 1.00 ಎಕರೆಗೆ ದಿನಾಂಕ: 3.1.2001 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆಯನ್ನು ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿಯನ್ನು ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿದ ಕಾರಣ ದಿನಾಂಕ: 18.2.2005 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಗೊಳಿಸಲಾಗಿತ್ತು.

ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2)ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು ಅದರಂತೆ ಸರ್ಕಾರವು ಉಲ್ಲೇಖಿತ (1) ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ, ಉಲ್ಲೇಖಿತ (2)ರ ಆದೇಶವನ್ನು ರದ್ದುಪಡಿಸುತ್ತಾ ಗುತ್ತಿಗೆ ಸಂಖ್ಯೆ: 404ನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಈ ಆದೇಶ ಮಾಡಲಾಗಿದೆ.

### ಆದೇಶ

### ಸಂಖ್ಯೆ: ಗಭೂಇ:ಡಿಸಿಬಿ:ಕಗಗು:404:2005-06/4812, ದಿನಾಂಕ: 12ನೇ ಜುಲೈ 2005

ಗಣಿ ಮತ್ತು ಭೂವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಸರ್ಕಾರದ ಪತ್ರದ ಸಂಖ್ಯೆ: 87:ಎಂ.ಎಂ.ಎನ್. 2005 ದಿನಾಂಕ: 18.6.2005 ರಲ್ಲಿ ನಿರ್ದೇಶಿಸಿರುವಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು ಕೆಬೇಹಳ್ಳಿ ಗ್ರಾಮದ ಸರ್ವೆ ನಂ. 201 ರಲ್ಲಿ 1-00 ಎಕರೆಗೆ ಶ್ರೀ ಎಂ. ಗೋವಿಂದರಾಜುರವರ ಹೆಸರಿನಲ್ಲಿ ಮಂಜೂರಾಗಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 404 ರ ಗುತ್ತಿಗೆಯನ್ನು ಗುತ್ತಿಗೆ ರದ್ದುಗೊಳಿಸಿದ ದಿನಾಂಕ: 18.2.2005 ರಿಂದ ಗುತ್ತಿಗೆಯನ್ನು ಪುನರ್ ಸ್ಥಾಪಿಸಿ ಗುತ್ತಿಗೆ ಮೇಲಿನ ಇಲ್ಲಿಯವರೆಗಿನ ರಾಜಧನ ಸ್ಥಿರ ತೆರಿಗೆಯನ್ನು ಪೂರ್ಣವಾಗಿ ಪಾವತಿಸುವ ನಿರ್ಬಂಧನೆಗೆ ಒಳಪಡಿಸಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮಾವಳಿಗಳ ಷರತ್ತಿನಂತೆ ಗುತ್ತಿಗೆಯನ್ನು ಪುನರ್ ಸ್ಥಾಪಿಸಲಾಗಿದೆ.

ಪಿ.ಆರ್. 992

**ನಿರ್ದೇಶಕರು**

ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

## ಕೃಷಿ ಮಾರಾಟ ಇಲಾಖೆ

### ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 2ನೇ ರಾಜಭವನ ರಸ್ತೆ, ಪಿ.ಬಿ. ನಂ. 5309, ಬೆಂಗಳೂರು-1

### ಅಧಿಸೂಚನೆ

### ಸಂಖ್ಯೆ: ಕೃಮಾಇ 336:ನಿಯವಿ:2004, ದಿನಾಂಕ: 12ನೇ ಜುಲೈ 2005

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 6ರ ಉಪಪ್ರಕರಣ (2)ರ ಮೇರೆಗೆ ಹೊರಡಿಸಲಾದ ಅಧಿಸೂಚನೆ ಸಂಖ್ಯೆ: ಕೃಮಾಇ:65:ನಿಯವಿ:2000, ದಿನಾಂಕ: 5.10.2000 (ಇನ್ನು ಮುಂದೆ ಸದರಿ ಅಧಿಸೂಚನೆ ಎಂದು ಉಲ್ಲೇಖಿಸಲಾಗಿದೆ) ರಲ್ಲಿ ಕರ್ನಾಟಕದಲ್ಲಿನ ಕೃಷಿ ಮಾರಾಟ ನಿರ್ದೇಶಕರು, ಬೆಂಗಳೂರು ಇವರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮುಳಬಾಗಿಲು ಸಮಿತಿ ವ್ಯಾಪ್ತಿಯ ಎನ್. ವಡ್ಡಹಳ್ಳಿ ಗ್ರಾಮ ಪಂಚಾಯಿತಿಯೊಳಗಿನ ಪ್ರದೇಶವನ್ನು “ಉಪ ಮಾರುಕಟ್ಟೆ” ಎಂದು ಮತ್ತು ಸದರಿ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು “ಉಪಮಾರುಕಟ್ಟೆ ಪ್ರಾಂಗಣ” ವೆಂದು ಘೋಷಿಸಿದ್ದರು.

ಮತ್ತು ಆದಕಾರಣ, ಮುಳಬಾಗಿಲು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಹೊಸದಾಗಿ ಖರೀದಿಸಿರುವ ಎನ್. ವಡ್ಡಹಳ್ಳಿ ಗ್ರಾಮದ ಸರ್ವೆ ನಂ. 4:2, 4:3, 4:4, 4:5 ಮತ್ತು 6 ರಲ್ಲಿನ 4 ಎಕರೆ 31 ಗುಂಟೆ ವಿಸ್ತೀರ್ಣದ ಈ ಕೆಳಕಂಡ ಸೀಮಾಬದ್ಧ ಸ್ಥಳವನ್ನು ಸದರಿ ಅಧಿಸೂಚನೆಯಲ್ಲಿ ಹೊರಡಿಸಲಾದ ಉಪಮಾರುಕಟ್ಟೆ ಪ್ರಾಂಗಣದ ಬದಲು “ಉಪಮಾರುಕಟ್ಟೆ ಪ್ರಾಂಗಣ” ವೆಂದು ಘೋಷಿಸಲು ಉದ್ದೇಶಿಸಲಾಗಿದೆ.

ಆದುದರಿಂದ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ) ಅಧಿನಿಯಮ, 1966ರ ಪ್ರಕರಣ 3ನ್ನು ಓದಿ ಪ್ರಕರಣ 6(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಸೈಯದ್ ಜಮೀರ್ ಪಾಷಾ ಆದ ನಾನು, ಸದರಿ ಅಧಿಸೂಚನೆಯಲ್ಲಿ ನಿರ್ದಿಷ್ಟಪಡಿಸಿರುವ ಸ್ಥಳವನ್ನು ರದ್ದುಪಡಿಸಿ, ಮುಳಬಾಗಿಲು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಮಾರುಕಟ್ಟೆ ಕ್ಷೇತ್ರದಲ್ಲಿ ಸರ್ಕಾರದ ಅಧಿಸೂಚನೆ ಮೂಲಕ ಅಧಿಸೂಚಿಸಲ್ಪಟ್ಟಿರುವ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಮುಳಬಾಗಿಲು ತಾಲ್ಲೂಕು ಕಸಬಾ ಹೋಬಳಿ ಎನ್. ವಡ್ಡಹಳ್ಳಿ ಗ್ರಾಮದ ಸರ್ವೆ ನಂ. 4:2, 4:3, 4:4, 4:5 ಮತ್ತು 6 ರಲ್ಲಿನ 4 ಎಕರೆ 31 ಗುಂಟೆ ಪ್ರದೇಶವನ್ನು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು ಉಪ ಮಾರುಕಟ್ಟೆ ಪ್ರಾಂಗಣವೆಂದು ಘೋಷಿಸಲು ಈ ಮೂಲಕ ಉದ್ದೇಶವನ್ನು ಪ್ರಕಟಿಸಿದ್ದೇನೆ.

ಮೇಲಿನ ಪ್ರಸ್ತಾವಕ್ಕೆ ಸಂಬಂಧಿಸಿದಂತೆ, ಯಾವುದೇ ಆಕ್ಷೇಪಣೆಗಳು ಮತ್ತು ಸಲಹೆಗಳು ಇದ್ದಲ್ಲಿ ಈ ಅಧಿಸೂಚನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಅಥವಾ ಕನ್ನಡ ದಿನಪತ್ರಿಕೆಯಲ್ಲಿ ಪ್ರಕಟವಾದ ದಿನಾಂಕದಿಂದ 32 ದಿವಸಗಳೊಳಗಾಗಿ ತಲುಪುವಂತೆ ಕಳುಹಿಸಿಕೊಟ್ಟಲ್ಲಿ ಪರಿಶೀಲಿಸಲಾಗುವುದು. ಆಕ್ಷೇಪಣೆ ಮತ್ತು ಸಲಹೆಗಳನ್ನು ಕೃಷಿ ಮಾರಾಟ ನಿರ್ದೇಶಕರು, ನಂ. 16, 2ನೇ ರಾಜಭವನ ರಸ್ತೆ, ಬೆಂಗಳೂರು-1 ಇವರ ವಿಳಾಸಕ್ಕೆ ಕಳುಹಿಸಿಕೊಡಲು ಸೂಚಿಸಲಾಗಿದೆ.

**ಅನುಸೂಚಿ**

ಮುಳಬಾಗಿಲು ತಾಲ್ಲೂಕು ಕಸಬಾ ಹೋಬಳಿ ಎನ್. ವಡ್ಡಹಳ್ಳಿ ಗ್ರಾಮದ ಸರ್ವೆ ನಂ. 4:2, 4:3, 4:4, 4:5 ಮತ್ತು 6 ರಲ್ಲಿನ 4 ಎಕರೆ 31 ಗುಂಟೆ ಪ್ರದೇಶದ ಈ ಕೆಳಗಿನ ಸೀಮಾಬದ್ಧ ಸ್ಥಳ:-

ಪೂರ್ವಕ್ಕೆ - ರಾಜಾ ಕಾಲುವೆ ಮತ್ತು ಎನ್.ವಿ. ವೆಂಕಟಸ್ವಾಮಿ ಜಮೀನು
ಪಶ್ಚಿಮಕ್ಕೆ - ಶಿವಶಂಕರ್ ಮತ್ತು ರಾಮೇಗೌಡರವರ ಜಮೀನು
ಉತ್ತರಕ್ಕೆ - ಚೌಡಯ್ಯ ಮತ್ತು ನಾರಾಯಣಪ್ಪರವರ ಜಮೀನು
ದಕ್ಷಿಣಕ್ಕೆ - ರಾಷ್ಟ್ರೀಯ ಹೆದ್ದಾರಿ

**ಸೈಯದ್ ಜಮೀರ್ ಪಾಷಾ**
ನಿರ್ದೇಶಕರು
ಕೃಷಿ ಮಾರಾಟ ಇಲಾಖೆ, ಬೆಂಗಳೂರು.

ಪಿ.ಆರ್. 993

## ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಹಾವೇರಿ

**ಪ್ರಕಟಣೆ**

**ಕ್ರ.ಸಂ.:ಜಿಸಕ:ಕಾ.ಪ.ತ: ಎಸ್-4:ಪ್ರಕಟಣೆ:05-06/1272, ದಿನಾಂಕ: 4ನೇ ಜುಲೈ 2005**

**ವಿಷಯ:** 2005-06ನೇ ಸಾಲಿಗಾಗಿ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀದರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ.ಎಲ್. 68. ಎಸ್.ಇ.ಡಬ್ಲ್ಯೂ 89, ಬೆಂಗಳೂರು, ದಿನಾಂಕ: 2.11.1990.
2) ಸರ್ಕಾರಿ ಆದೇಶ ಸಂಖ್ಯೆ: ಸಕಇ:421:ಪಕವಿ:95, ದಿನಾಂಕ: 29.7.1997.
3) ಸರ್ಕಾರಿ ಆದೇಶ ಸಂಖ್ಯೆ: ಸಕಇ:535:ಪಕವಿ:2000, ಬೆಂಗಳೂರು, ದಿನಾಂಕ: 28.3.2001.

ಪರಿಶಿಷ್ಟ ಜಾತಿ : ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ, ನ್ಯಾಯಾಂಗ, ಆಡಳಿತದಲ್ಲಿ ತರಬೇತಿ ಕೊಡುವ ಕುರಿತು ಉಲ್ಲೇಖದಲ್ಲಿ ನಮೂದಿಸಿದ ಸರ್ಕಾರಿ ಆದೇಶದನ್ವಯ ಅರ್ಹ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

| ಅ.ನಂ. | ಯೋಜನೆಯ ಹೆಸರು | ಆಯ್ಕೆ ಮಾಡುವ ಅಭ್ಯರ್ಥಿಗಳ ಸಂಖ್ಯೆ | | | ತರಬೇತಿ ಅವಧಿ | ತರಬೇತಿ ಶಿಷ್ಯವೇತನ (ಪ್ರತಿ ಮಾಹೆಗೆ) |
|---|---|---|---|---|---|---|
| | | ಪ.ಜಾ | ಪ.ಪಂ. | ಒಟ್ಟು | | |
| 1 | ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಿಗೆ ನ್ಯಾಯಾಂಗ ಆಡಳಿತದಲ್ಲಿ ತರಬೇತಿ ಯೋಜನೆ | 04 | 02 | 6 | 4 ವರ್ಷ | ರೂ. 1000.00 |

ಅರ್ಹತೆಗಳು:-

1. ಸದರಿ ಯೋಜನೆಯಲ್ಲಿ ಅರ್ಜಿದಾರರು, ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಕ್ಕೆ ಸೇರಿದ ಕಾನೂನು ಪದವೀಧರರಾಗಿರಬೇಕು, ಅರ್ಜಿ ಸಲ್ಲಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷದಿಂದೀಚೆಗೆ ಕಾನೂನು ಪದವಿಯನ್ನು ಪಾಸು ಮಾಡಿರಬೇಕು. ಅಂದರೆ 2003-04, 2004-05ನೇ ಸಾಲಿನಲ್ಲಿ ಅಂತಿಮ ಕಾನೂನು ಪರೀಕ್ಷೆಗಳನ್ನು ಪಾಸಾದವರು ಮಾತ್ರ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.
2. ವಕೀಲಿ ವೃತ್ತಿಯನ್ನು ನಡೆಸಲು ಅರ್ಹತೆಗಳನ್ನು ಪಡೆದಿರುವ ಕಾನೂನು ಪದವೀಧರರು ಮಾತ್ರ ಅರ್ಜಿಗಳನ್ನು ಸಲ್ಲಿಸಲು ಅರ್ಹರು.
3. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ಗರಿಷ್ಟ ವಯಸ್ಸು 35 ವರ್ಷ ಮೀರಿರಬಾರದು.
4. ಅಪೂರ್ಣ ಮತ್ತು ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
5. ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳು ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋಗಬಾರದು, ಬಿಟ್ಟುಹೋದಲ್ಲಿ ಶಿಷ್ಯವೇತನವನ್ನು ಪರತ್ ವಸೂಲಿ ಮಾಡಲಾಗುವುದು.
6. ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು, ರೂ. 1000.00 (ಒಂದು ಸಾವಿರ) ದಂತೆ ಶಿಷ್ಯವೇತನ ಕೊಡಲಾಗುವುದು.
7. ಆಯ್ಕೆಯಾದ ಅಭ್ಯರ್ಥಿಗಳನ್ನು ಡಿಸ್ಟ್ರಿಕ್ಟ್, ಪಬ್ಲಿಕ್ ಪ್ರಾಸಿಕ್ಯೂಟರ್: ಸರಕಾರಿ ವಕೀಲರು, ಅಥವಾ 20 ವರ್ಷಕ್ಕೂ ಮೇಲ್ಪಟ್ಟು ವಕೀಲಿ ವೃತ್ತಿಯನ್ನು ನಡೆಸಿದ ಖಾಸಗೀ ವಕೀಲರ ಬಳಿ ತರಬೇತಿಗೆ ನಿಯೋಜಿಸಲಾಗುವುದು.

ಅರ್ಹ ಅಭ್ಯರ್ಥಿಗಳು ಸಂಬಂಧಿಸಿದ ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿಯಿಂದ ನಿಗದಿತ ಅರ್ಜಿ ನಮೂನೆ ಪಡೆದು, ಅರ್ಜಿ ತುಂಬಿ ಆದಾಯ ಪ್ರಮಾಣ ಪತ್ರ, ಜಾತಿ ಪ್ರಮಾಣ ಪತ್ರ, ಜನ್ಮ ದಾಖಲೆ ಕುರಿತು ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಬಾರ್ ಅಸೋಸಿಯೇಶನ್, ಸದಸ್ಯತ್ವದ ದೃಢೀಕೃತ ಪ್ರಮಾಣ ಪತ್ರಗಳೊಂದಿಗೆ ದಿನಾಂಕ: 31.7.2005 ರೊಳಗಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಹಾವೇರಿ ಇವರಿಗೆ ತಲುಪುವಂತೆ ಅರ್ಜಿ ಸಲ್ಲಿಸಬೇಕು. ಮಾನ್ಯ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜಿಲ್ಲಾ ಪಂಚಾಯತ್ ಹಾವೇರಿ, ಇವರ ಅಧ್ಯಕ್ಷತೆಯಲ್ಲಿ ರಚಿತವಾದ ಆಯ್ಕೆ ಸಮಿತಿಯಿಂದ ಅಭ್ಯರ್ಥಿಗಳನ್ನು ಸಂದರ್ಶನದ ಮೂಲಕ ಆಯ್ಕೆ ಮಾಡಲಾಗುವುದು. ಇತರೆ ಹೆಚ್ಚಿನ ಮಾಹಿತಿಗಳನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ ಹಾವೇರಿ ಇವರನ್ನು ಸಂಪರ್ಕಿಸಿ ಪಡೆಯಬಹುದು.

ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿ ಹಾಗೂ ಸದಸ್ಯ ಕಾರ್ಯದರ್ಶಿ
ಕಾನೂನು ಪದವೀಧರರ ಆಡಳಿತ
ನ್ಯಾಯಾಧೀಕರಣ ತರಬೇತಿ ಆಯ್ಕೆ ಸಮಿತಿ ಹಾವೇರಿ.

ಪಿ.ಆರ್. 994

**IN THE COURT OF THE J.M.F.C.II COURT BELGAUM AT : BELGAUM**
**CORRIGENDUM NOTICE**
**Dated 7th July 2005**

In IInd Para of Notice dated 25th February 2005, Published in Part-III, Page No. 347 on March 24, 2005 may please be read as under.

"Therefore it is hereby proclaimed that any one who has got a claim for thebelow mentioned property may appear before this Court within six months (instead of one month) from the date of publication and to prefer his or her claim failing which the property will be confiscated and no claims there after will be entertained.

LIST OF UNCLAIMED PROPERTY
"AS PUBLISHED ALREADY"

**Smt. UMA S. MATHAD**
PR-995 J.M.F.C. II COURT, BELGAUM.

**ಸಹಕಾರ ಸಂಘಗಳ ಉಪನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿ ನಡವಳಿಕೆಗಳು**

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹುಣಸೆಹಳ್ಳಿ, ಹರಪನಹಳ್ಳಿ ತಾಲ್ಲೂಕು ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ: ಸಿಆರ್:60:2002-03, ದಿನಾಂಕ: 30.9.2003.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರ ಪತ್ರ ದಿನಾಂಕ: 24.6.2005.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ಕ್ರಮ ಸಂಖ್ಯೆ: ಸನಿಹ:ರಿನಂ:2456:ಎಜಿಆ: 97-98, ದಿನಾಂಕ: 10.5.1998 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರ ಆದೇಶದಲ್ಲಿ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇ ಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಉಪವಿಭಾಗ, ಹರಪನಹಳ್ಳಿ ಇವರ ಮೂಲಕ ಉಲ್ಲೇಖ (2)ರ ರೀತ್ಯಾ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಇವರೂ ಸಹಾ ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಶಿಫಾರಸ್ಸು ಮಾಡಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ:ಎಲ್‌ಕ್ಯೂಡಿ:ಸಿಆರ್ 60:2002-03, ದಿನಾಂಕ: 8ನೇ ಜುಲೈ 2005**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 75 ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿನಾಂಕ: 21.11.2002 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ದಾವಣಗೆರೆ ಜಿಲ್ಲೆಯ ಸಹಕಾರ ಸಂಘಗಳ ಉಪನಿಬಂಧಕರು ಕೆ.ಎಂ. ಆಶಾ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಹುಣಸೆಹಳ್ಳಿ, ಹರಪನಹಳ್ಳಿ ತಾಲ್ಲೂಕು ಇದರ ನೋಂದಣಿ ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ ಉಪವಿಭಾಗ, ಹರಪನಹಳ್ಳಿ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಹಾಗೂ ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ: 8.7.2005 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್. 996 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ತುಮಕೂರು ವಿಭಾಗ, ತುಮಕೂರು**

**ಸಾರ್ವಜನಿಕ ಪ್ರಕಟಣೆ**

**ಸಂಖ್ಯೆ: ಎ8/71(ಎ) ಕ್ರೈಮ್ ನಂ. 16/2003-04/ಸಂಖ್ಯೆ: ಎ8/71(ಎ) ವಿವ. 160/99-2000, ದಿನಾಂಕ: 7ನೇ ಜುಲೈ 2005**

ತುಮಕೂರು ಅರಣ್ಯ ವಿಭಾಗ ವ್ಯಾಪ್ತಿಯ ವಿವಿಧ ಸ್ಥಳಗಳಲ್ಲಿ ಶ್ರೀಗಂಧ ಮತ್ತು ಶ್ರೀಗಂಧದ ಎಣ್ಣೆಯನ್ನು ಕಳ್ಳ ಸಾಗಾಣಿಕೆ ಮಾಡುತ್ತಿದ್ದ ವಿವಿಧ ವಾಹನಗಳನ್ನು ಈ ಕೆಳಕಂಡ ದಿನಾಂಕಗಳಂದು ಪೊಲೀಸರು ಮಾಲು ಸಮೇತ ಹಿಡಿದು ಮೊಕದ್ದಮೆ ದಾಖಲು ಮಾಡಿ ಅಮಾನತ್ತುಪಡಿಸಿರುತ್ತಾರೆ. ಹಾಗೂ ಸದರಿ ವಾಹನಗಳಲ್ಲಿನ ಅರಣ್ಯ ಉತ್ಪನ್ನದ ಸಮೇತ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಸದರಿ ವಾಹನಗಳ ಮಾಲೀಕರು ಯಾರೂ ಸಹ ಈವರೆವಿಗೆ ವಾಹನ ಮಾಲೀಕತ್ವದ ಬಗ್ಗೆ ಈ ಕಛೇರಿಗೆ ಸಂಪರ್ಕಿಸಿರುವುದಿಲ್ಲ. ಈ ಕೆಳಕಂಡ ವಾಹನಗಳ ಮಾಲೀಕರು ಅಥವಾ ವಾರಸುದಾರರು ಯಾರಾದರೂ ಇದ್ದಲ್ಲಿ ಅಥವಾ ತಕರಾರು ಸಮಜಾಯಿಷಿ ಏನಾದರೂ ಇದ್ದಲ್ಲಿ ಈ ಪ್ರಕಟಣೆ ಹೊರಡಿಸಿದ 30 ದಿನಗಳ ಒಳಗೆ ಸಂಬಂಧಪಟ್ಟ ದಾಖಲೆಗಳ ಸಹಿತ ಈ ಕೆಳಕಂಡವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸುವುದು. ತಪ್ಪಿದಲ್ಲಿ ಈ ವಾಹನಗಳ ಮಾಲೀಕರು : ವಾರಸುದಾರರು ಯಾರು ಇಲ್ಲವೆಂದು ಏಕಪಕ್ಷೀಯವಾಗಿ ತೀರ್ಮಾನಿಸಿ ಕರ್ನಾಟಕ ಅರಣ್ಯ ನಿಯಮ 1963 ರೂಲ್ಸ್ 71(ಎ) ರೀತ್ಯಾ ವಾಹನಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಕ್ರ.ಸಂ. | ಸ್ಥಳ ಮತ್ತು ದಿನಾಂಕ | ಅರಣ್ಯ ಉತ್ಪನ್ನ ವಶಪಡಿಸಿಕೊಂಡಿರುವ ವಿವರ | | | |
|---|---|---|---|---|---|
| | | ಅರಣ್ಯ ಉತ್ಪನ್ನದ ಪ್ರಮಾಣ | ವಾಹನದ ಮಾದರಿ ಮತ್ತು ಸಂಖ್ಯೆ | ಪತ್ತೆ ಹಚ್ಚಿದ ಅಧಿಕಾರಿಗಳು | ಅಪರಾಧ ಸಂಖ್ಯೆ |
| 1 | ತುಮಕೂರು-ಶಿರಾ ರಸ್ತೆ ಎಮ್ಮೇರಹಳ್ಳಿ ಗ್ರಾಮದ ಹತ್ತಿರ 8.2.2004 | 10 ಲೀಟರ್ ಶ್ರೀಗಂಧದ ಎಣ್ಣೆ ಮಾರುತಿ ಕಾರ್ 800 | KA-01-M-2865 E.No. F8 IN 128756 C.No. FT 308-IN-106942 | ಸರ್ಕಲ್ ಇನ್ಸ್‌ಪೆಕ್ಟರ್ ಆಫ್ ಪೊಲೀಸ್ ಶಿರಾ | 16/2004 |
| 2 | ತುಮಕೂರು-ಶಿರಾ ರಸ್ತೆ, ತಿಮ್ಮರಾಜನಹಳ್ಳಿ ಗ್ರಾಮದ ಹತ್ತಿರ 22.12.1999 | 203 ಕೆಜಿ ಶ್ರೀಗಂಧದ ಚಕ್ಕೆಗಳು | KA-03-M-3003 Maruthi Car | ಸಬ್ ಇನ್ಸ್‌ಪೆಕ್ಟರ್ ಆಫ್ ಪೊಲೀಸ್ ಶಿರಾ | 160/99 |

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 1000 ತುಮಕೂರು ವಿಭಾಗ, ತುಮಕೂರು.

## ವ್ಯವಹಾರ ನ್ಯಾಯಾಧೀಶರ (ಕಿ.ಶ್ರೇ.) ಮತ್ತು ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಗಳವರ ನ್ಯಾಯಾಲಯ, ಯಲಬುರ್ಗಾ ಜಿಲ್ಲಾ : ಕೊಪ್ಪಳ

### ಸಾರ್ವಜನಿಕ ಪ್ರಕಟಣೆ

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ಕಾಣಿಸಿದ ಮುದ್ದೆ ಮಾಲುಗಳಿಗೆ ಯಾವುದೇ ವಾರಸುದಾರರಾಗಲೀ, ಹಕ್ಕುದಾರರಾಗಲೀ ಇಲ್ಲಿಯವರೆಗೆ ತಮ್ಮದೆಂದು ಗುರುತಿಸಿ ಸದರಿ ಮುದ್ದೆ ಮಾಲುಗಳು ತಮಗೆ ಬೇಕೆಂದು ಪ್ರಯತ್ನ ಮಾಡಿರುವುದಿಲ್ಲ.

ಕಾರಣ ಈ ಪ್ರಕಟಣೆ ಹೊರಡಿಸಿದ ದಿನಾಂಕದಿಂದ ಆರು (6) ತಿಂಗಳ ಒಳಗಾಗಿ ಕೆಳಗೆ ಕಾಣಿಸಿದ ಮುದ್ದೆ ಮಾಲುಗಳ ಬಗ್ಗೆ ತಮ್ಮ ವಾರಸುದಾರಿಕೆಯಾಗಲೀ ಅಥವಾ ಹಕ್ಕುದಾರಿಕೆಯಾಗಲೀ ಇದ್ದಲ್ಲಿ ತಮ್ಮದೆಂದು ಖಚಿತಪಡಿಸಿಕೊಳ್ಳಲು ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿ ಒಯ್ಯಬಹುದು. ಇದಕ್ಕೆ ತಪ್ಪಿದಲ್ಲಿ ಸದರಿ ಮುದ್ದೆ ಮಾಲುಗಳಿಗೆ ವಾರಸುದಾರರಾಗಲೀ ಅಥವಾ ಹಕ್ಕುದಾರರಾಗಲೀ ಯಾರು ಇರುವುದಿಲ್ಲವೆಂದು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಕ್ರಮ ಸಂಖ್ಯೆ | ಪ್ರಕರಣದ ನಂಬರು | ಪಿ.ಆರ್. ನಂಬರು | ಪ್ರಕರಣವು ನಿಕಾಲೆಯಾದ ದಿನಾಂಕ | ಸ್ವತ್ತಿನ ವಿವರ |
|---|---|---|---|---|
| 1 | ಕ್ರಿ.ಮಿ. 17:05 | 41:05 | | 1) ಒಂದು ಕೆಂಪು ಮಿಶ್ರಿತ ಹಳೆಯ ಸುಜುಕಿ ಸಾಮ್‌ರಾಯ್ ಮೋಟಾರ್ ಸೈಕಲ್ ನಂ. ಕೆ.ಎ. 35:ಇ-4266 ಅಂತಾ ನಂಬರ್ ಪ್ಲೇಟ್ ಇದ್ದದ್ದು ಅ:ಕಿ: ರೂ. ಹತ್ತು ಸಾವಿರ |
| 2 | ಕ್ರಿ.ಮಿ. 18:05 | 42:05 | | 1) ಒಂದು ಕಪ್ಪು ಬಣ್ಣದ ಹಳೆಯ ಹೊಂಡಾ ಕಂಪನಿಯ ಮೋಟಾರ್ ಸೈಕಲ್ ನಂಬರ್ ಪ್ಲೇಟ್ ಇರುವುದಿಲ್ಲಾ, ಚೆಸ್ಸಿನ ನಂಬರ್ ಎಐಒಎಫ್-022060 ಅಂದಾಜು ಕಿಮ್ಮತ್ತು 8 ರಿಂದ 10 ಸಾವಿರ ರೂಪಾಯಿಗಳು. |
| 3 | ಕ್ರಿ.ಮಿ. 19:05 | 43:05 | | 1) ಒಂದು ಕಪ್ಪು ಬಣ್ಣದ ಹಳೆಯ ಬಜಾಜ್ ಕಂಪನಿಯ ಮೋಟಾರ್ ಸೈಕಲ್ ನಂಬರ್ ಕೆ.ಎ. 17:ಹೆಚ್.4480 ಅಂದಾಜು ಕಿಮ್ಮತ್ತು ರೂ. 8 ಸಾವಿರ ರೂಪಾಯಿಗಳು |

ಇಂದು ದಿನಾಂಕ: 16ನೇ ಜುಲೈ 2005 ರಂದು ನನ್ನ ಸಹಿ ಮತ್ತು ನ್ಯಾಯಾಲಯದ ಮೊಹರಿನೊಂದಿಗೆ ಕೊಡಲ್ಪಟ್ಟಿದೆ.

**ಮಂಜುನಾಥ ಜಿ.ಎ.**

ಪಿ.ಆರ್. 1001 ವ್ಯ.ನ್ಯಾ. (ಕಿ.ಶ್ರೇ.) ಮತ್ತು ಪ.ದ.ನ್ಯಾ.ದಂ.ಗಳು,

ಯಲಬುರ್ಗ.

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-2, ಬಿಜಾಪುರ

### ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಮಪ್ರ/ಎಸ್‌ಆರ್-142/2005, ದಿನಾಂಕ: 8ನೇ ಜುಲೈ 2005

**ಅರ್ಜಿದಾರರು:**

ಶ್ರೀ ಶಶಿಕಲ ಗಂಡ ಗಿರಿಮಲ್ಲಯ್ಯ ಶಿಕಲವಾಡಿ,
ವಾಸ: ನಾಗೂರ,
ತಾಲ್ಲೂಕು: ಬಿ. ಬಾಗೇವಾಡಿ
ಜಿಲ್ಲೆ: ಬಿಜಾಪುರ

**ವಿರುದ್ಧ**

**ಪ್ರತಿವಾದಿಗಳು:**

1) ಸಂಗನಬಸಯ್ಯಾ ತಂದೆ ಸಂಗಯ್ಯ ಮಠ,
ವಾಸ: ನಾಗೂರ, ತಾ: ಬಿ. ಬಾಗೇವಾಡಿ,
ಜಿಲ್ಲೆ: ಬಿಜಾಪುರ

2) ಬ್ರ್ಯಾಂಚ್ ಮ್ಯಾನೇಜರ್,
ದಿ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ.
ಗುಲ್ಬರ್ಗಾ

**ಪ್ರಕಟಣೆ**

ಶ್ರೀ: ಶ್ರೀಮತಿ ಶಶಿಕಲ ಗಂಡ ಗಿರಿಮಲ್ಲಯ್ಯ ಶಿಕಲವಾಡಿ, ಇವರುಗಳಾದ ತಾವು ಮೃತ ಗಿರಿಮಲ್ಲಯ್ಯ ಸಂಗನಬಸಯ್ಯಾ ಶಿಕಲವಾಡಿ ಇವರ ಹೆಂಡತಿ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಗಿರಿಮಲ್ಲಯ್ಯ ಸಂಗನಬಸಯ್ಯ ಶಿಕಲವಾಡಿ ಇವರು ಒಂದನೇ ಪ್ರತಿವಾದಿಗಳಾದ ಸಂಗನಬಸಯ್ಯ ತಂದೆ ಸಂಗಯ್ಯ ಮಠ ಇವರ ಬಜಾಜ್ ಮೋಟಾರ್ ಸೈಕಲ್ ಸಂಖ್ಯೆ: ಕೆಎ 28 ಎಲ್

4967 ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರ**

ಪಿ.ಆರ್. 1003

ಕಾರ್ಮಿಕ ಪರಿಹಾರ ಆಯುಕ್ತರು,

ಉಪ ವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-2, ಬಿಜಾಪುರ**

**ಪ್ರಕರಣ ಸಂಖ್ಯೆ: ಕಾಅಬಿ:ಕಾನಪ:ಮಪ್ರ/ಎಸ್‌ಆರ್-143/2005, ದಿನಾಂಕ: 8ನೇ ಜುಲೈ 2005**

**ಅರ್ಜಿದಾರರು:**

1) ಕರಿಯಪ್ಪ ತಂದೆ ಸಿದ್ದಪ್ಪ ವಾಲಿಕರ್,
2) ರೇಣುಕಾ ತಂದೆ ಕರಿಯಪ್ಪ ವಾಲಿಕರ್
3) ಸುನೀಲ್ ತಂದೆ ಕರಿಯಪ್ಪ ವಾಲಿಕರ್
4) ಗೀತಾ ತಂದೆ ಕರಿಯಪ್ಪ ವಾಲಿಕರ್
5) ಅನಿಲ ತಂದೆ ಕರಿಯಪ್ಪ ವಾಲಿಕರ್

ವಾಸ: ಮುದ್ದೇಬಿಹಾಳ,
ತಾಲ್ಲೂಕು: ಮುದ್ದೇಬಿಹಾಳ
ಜಿಲ್ಲೆ: ಬಿಜಾಪುರ

**ವಿರುದ್ಧ**

**ಪ್ರತಿವಾದಿಗಳು:**

1) ಶರಣಬಸಪ್ಪ ತಂದೆ ಯಮನಪ್ಪ ಬಿರಾದಾರ
ಕೇರಾಫ್ ಮಲ್ಲಣ್ಣ ಭೀಮಪ್ಪ ಕನಮೇಶ್ವರ
ವಾಸ: ಬಿದರಕುಂದಿ, ತಾ: ಮುದ್ದೇಬಿಹಾಳ
ಜಿಲ್ಲೆ: ಬಿಜಾಪೂರ

2) ಬ್ರ್ಯಾಂಚ್ ಮ್ಯಾನೇಜರ್
ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.
ಬಿಜಾಪೂರ.

**ಪ್ರಕಟಣೆ**

ಶ್ರೀ: ಶ್ರೀಮತಿ 1) ಕರಿಯಪ್ಪ ತಂದೆ ಸಿದ್ದಪ್ಪ ವಾಲಿಕರ್ 2) ರೇಣುಕಾ ತಂದೆ ಕರಿಯಪ್ಪ ವಾಲಿಕರ್ 3) ಸುನೀಲ ತಂದೆ ಕರಿಯಪ್ಪ ವಾಲಿಕರ್ 4) ಗೀತಾ ತಂದೆ ಕರಿಯಪ್ಪ ವಾಲಿಕರ್ 5) ಅನಿಲ ತಂದೆ ಕರಿಯಪ್ಪ ವಾಲಿಕರ್, ಇವರುಗಳಾದ ತಾವು ಮೃತ ಶ್ರೀಮತಿ ಕಸ್ತುರೆವ್ವ ಗಂಡ ಕರಿಯಪ್ಪ ವಾಲಿಕರ್ ಇವರ ಗಂಡ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಕಸ್ತುರೆವ್ವ ಗಂಡ ಕರಿಯಪ್ಪ ವಾಲಿಕರ್ ಇವರು ಒಂದನೇ ಪ್ರತಿವಾದಿಗಳಾದ ಶರಣಬಸಪ್ಪ ತಂದೆ ಯಮನಪ್ಪ ಬಿರಾದಾರ ಇವರ ಟ್ರಾಕ್ಟರ್ ಮತ್ತು ಟ್ರೇಲರ್ ಸಂಖ್ಯೆ ಕೆಎ 29 ಟಿ: 1515-1516 ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ದಲಿಂಗಪ್ಪ ಆಲೂರ**

ಪಿ.ಆರ್. 1004

ಕಾರ್ಮಿಕ ಪರಿಹಾರ ಆಯುಕ್ತರು,

ಉಪ ವಿಭಾಗ-2, ಬಿಜಾಪುರ ಜಿಲ್ಲೆ, ಬಿಜಾಪೂರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರಕರಣ ಸಂಖ್ಯೆ: ಕಾಅದಾ:ಕಾನಪ:ಸಿಆರ್-163/2005, ದಿನಾಂಕ: 17ನೇ ಜೂನ್ 2005**

**ಅರ್ಜಿದಾರರು:**

1) ಬಸಮ್ಮ ಕೋಂ ತಿಪ್ಪಣ್ಣ ಮತ್ತಿತರ 3 ಜನರು
ವಾಸ: 4ನೇ ಕ್ರಾಸ್, ಮುದ್ದಾಬೋವಿ ಕಾಲೋನಿ, ಬೇತೂರು ರೋಡ್, ದಾವಣಗೆರೆ

**ವಿರುದ್ಧ**

**ಪ್ರತಿವಾದಿಗಳು:**

1) ಅನ್ವರ್ ಸಾಬ್ ಬಿನ್ ಅಮೀರ್ ಸಾಬ್
ಲಾರಿ ಮಾಲೀಕರು, ನಂ. ಸಿ.ಟಿ.ಯು 3024
ವಾಸ: ನಂ. 271, 1ನೇ ಕ್ರಾಸ್, 1ನೇ ಮೇನ್ ರೋಡ್, ನರಸರಾಜಪೇಟೆ, ದಾವಣಗೆರೆ

2) ದಿ ಮ್ಯಾನೇಜರ್
ದಿ ನ್ಯಾಷಿನಲ್ ಇನ್ಸೂರೆನ್ಸ್ ಕಂ.ಲಿ.
ಚಾಮರಾಜಪೇಟೆ, ದಾವಣಗೆರೆ.

**ಪ್ರಕಟಣೆ**

ಶ್ರೀ: ಶ್ರೀಮತಿ ಬಸಮ್ಮ ಎನ್ ಕೃಷ್ಣ, ಮಂಜುಳ, ರೂಪ ಇವರುಗಳಾದ ತಾವು ಮೃತ ಶ್ರೀ ನಾರಾಯಣ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ನಾರಾಯಣ ರವರು ಒಂದನೇ ಪ್ರತಿವಾದಿಗಳಾದ ಅನ್ವರ್ ಸಾಬ್ ಇವರ ಟ್ರಕ್‌ನಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ

ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1005

ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,

ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾನೂನು ಮಾಪನಶಾಸ್ತ್ರ ನಿಯಂತ್ರಕರ ಕಛೇರಿ**

**ನಂ. 1, ಆಲಿ ಆಸ್ಕರ್ ರಸ್ತೆ, ಪಿ.ಬಿ. ನಂ. 175, ಬೆಂಗಳೂರು**

**ತಿದ್ದುಪಡಿ**

**ಸಂಖ್ಯೆ: ಕಾಮಾ೯:ಸವಿತಾ:ಕ್ಷೇವ್ಯಾ:ಸಿಆರ್-70/03-04, ದಿನಾಂಕ: 30ನೇ ಜೂನ್ 2005**

ದಿನಾಂಕ: 25.6.2005 ರಂದು ಈ ಕಛೇರಿಯಿಂದ ಮೇಲಿನ ಸಮ ಸಂಖ್ಯೆಯಲ್ಲಿ ಹೊರಡಿಸಲಾದ ಕ್ಷೇತ್ರವ್ಯಾಪ್ತಿ ಮರುವಿಂಗಡಣಾ ಅಧಿಸೂಚನೆಯಲ್ಲಿ ಕ್ರಮ ಸಂಖ್ಯೆ 8ರ ಕಲಂ 3 ರಲ್ಲಿ ನಮೂದಿಸಿರುವ ಕ್ಷೇತ್ರವ್ಯಾಪ್ತಿಯಲ್ಲಿ ಬ್ಯಾಡಗಿ ಕ್ಷೇತ್ರ ವ್ಯಾಪ್ತಿ ಬಿಟ್ಟು ಹೋಗಿರುತ್ತದೆ.

ಆದುದರಿಂದ, ಕಲಂ 3 ರಲ್ಲಿ ಹಾವೇರಿ, ಹಾನಗಲ್ ಜೊತೆಗೆ ಬ್ಯಾಡಗಿ ಎಂದು ಸೇರಿಸಿಕೊಂಡು ಓದಿಕೊಳ್ಳಲು ಈ ಮೂಲಕ ಆದೇಶಿಸಿದೆ.

**ಸಿ.ಎಂ. ಮಲ್ಲಿಕಾರ್ಜುನ**

ಪಿ.ಆರ್. 1013

ಕಾನೂನು ಮಾಪನಶಾಸ್ತ್ರ ನಿಯಂತ್ರಕರು.

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,**

**ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು- ೫೬೦ ೦೦೧.**

**ಪ್ರಕಟಣೆ**

**ಸಂಖ್ಯೆ:ಕರಾಆ:ಆಡಳಿತ:೨೭:೨೦೦೪, ದಿನಾಂಕ: ೧೨ನೇ ಜುಲೈ ೨೦೦೫**

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು ಇಲ್ಲಿ ದಿನಾಂಕ ೨-೨-೨೦೦೬ರ ಅಪರಾಹ್ನದಿಂದ ಖಾಲಿಯಾಗುವ ಸದಸ್ಯರ ಸ್ಥಾನಕ್ಕೆ ಈ ಮುಂದೆ ಓದಲಾಗುವ ಅರ್ಹತೆವುಳ್ಳ ಅಭ್ಯರ್ಥಿಗಳಿಂದ ನಿಗಧಿತ ಅರ್ಜಿ ನಮೂನೆಯಲ್ಲಿ ದಿನಾಂಕ ೩೦ನೇ ಜೂನ್ ೨೦೦೫ರ ಸಂಜೆ ೫ ಗಂಟೆಯೊಳಗಾಗಿ ಅರ್ಹ ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಬಹುದೆಂದು ದಿನಾಂಕ: 31.5.2005ರ ಪ್ರಕಟಣೆಯಲ್ಲಿ ಸೂಚಿಸಿತ್ತು. ಈ ಪ್ರಕಟಣೆಯ ಅನುಸಾರವಾಗಿ ಅರ್ಹ ಹಾಗೂ ಸಾಕಷ್ಟು ಪ್ರಮಾಣದ ಅರ್ಜಿಗಳು ಬಂದಿಲ್ಲದೇ ಇರುವುದರಿಂದ, ಈ ಮುಂದಿನ ಅರ್ಹತೆಯುಳ್ಳ ಅಭ್ಯರ್ಥಿಗಳು ದಿನಾಂಕ: 16.8.2005 ರ ಸಂಜೆ 5.00 ಗಂಟೆಯೊಳಗಾಗಿ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು ಇಲ್ಲಿಗೆ ಸಲ್ಲಿಸಬಹುದು.

**ಅರ್ಹತೆಗಳು:-**

೧) ಅರ್ಜಿ ಸಲ್ಲಿಸುವ ದಿನಾಂಕದಂದಿಗೆ ೩೫ ವರ್ಷ ವಯಸ್ಸಾಗಿರಬೇಕು.

೨) ಯಾವುದಾದರೂ ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು.

೩) ಪ್ರಾಮಾಣಿಕತೆ, ದಕ್ಷತೆ ಹಾಗೂ ನಿಷ್ಠೆಯಿಂದ ಇರುವುದರ ಜೊತೆಗೆ ಅರ್ಥಶಾಸ್ತ್ರ/ಕಾನೂನು/ವಾಣಿಜ್ಯ/ಲೆಕ್ಕಪತ್ರ/ ಕೈಗಾರಿಕೆ/ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ ೧೦ ವರ್ಷಗಳ ಅನುಭವವುಳ್ಳವರಾಗಿರಬೇಕು.

೪) ಜಿಲ್ಲಾ ಮಟ್ಟದ ನ್ಯಾಯಾಲಯಗಳಲ್ಲಿ ನ್ಯಾಯಾಧೀಶರಾಗಿ ಕನಿಷ್ಠ 10 ವರ್ಷಗಳ ಸೇವೆಯನ್ನು ಸಲ್ಲಿಸಿದವರಿಗೆ ಆದ್ಯತೆಯನ್ನು ಕಾಯ್ದೆ ಅನುಸಾರ ನೀಡಲಾಗುವುದು.

೫) ಜಿಲ್ಲಾ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿರುವವರು ಅಥವಾ ಜನವರಿ 31ಕ್ಕೆ ಜಿಲ್ಲಾ ನ್ಯಾಯಾಧೀಶರ ವೃಂದದಿಂದ ನಿವೃತ್ತಿ ಹೊಂದಿರುವವರೂ ಅರ್ಜಿಯನ್ನು ಸಲ್ಲಿಸಬಹುದು.

ಈ ಮೇಲಿನ ಅರ್ಹತೆಯುಳ್ಳವರು ಹಾಗೂ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಮಾಹೆಯಾನ ರೂ. 8,500.00 ಗೌರವಧನ ಮತ್ತು ರೂ. 1,500.00ರ ಪ್ರಯಾಣ ಭತ್ಯೆಯನ್ನು ಪಡೆದು ನ್ಯಾಯಿಕ ಸ್ವರೂಪದ ಕೆಲಸವನ್ನು ನಿರ್ವಹಿಸಲು ಇಚ್ಛಿಸುವವರು ತಮ್ಮ ಅರ್ಜಿಗಳನ್ನು ಸಲ್ಲಿಸಬಹುದು.

ಅರ್ಜಿ ನಮೂನೆಯನ್ನು ಉಚಿತವಾಗಿ ರಾಜ್ಯ ಆಯೋಗದ ಕಛೇರಿಯಿಂದ ಅಥವಾ ಜಿಲ್ಲಾ ವೇದಿಕೆಗಳ ಕಛೇರಿಯಿಂದ ಪಡೆದುಕೊಳ್ಳಬಹುದಾಗಿರುತ್ತದೆ. ಅರ್ಜಿ ನಮೂನೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿದ್ದು ಅದರ ಆಧಾರದ ಮೇಲೆಯೂ ಬೆರಳಚ್ಚಿಸಿಕೊಂಡು, ಅರ್ಹತೆಗಳ ಮತ್ತು ಪ್ರಮಾಣ ಪತ್ರಗಳ ದೃಢೀಕೃತ ಪ್ರತಿಗಳೊಂದಿಗೆ ರಾಜ್ಯ ಆಯೋಗಕ್ಕೆ ದಿನಾಂಕ: 16ನೇ ಆಗಸ್ಟ್ 2005ರ ಸಂಜೆ 5.00 ಗಂಟೆಯೊಳಗಾಗಿ ಸಲ್ಲಿಸಬಹುದಾಗಿರುತ್ತದೆ.

ಮಾನ್ಯ ಅಧ್ಯಕ್ಷರ ಆದೇಶಾನುಸಾರ,

**ಕೆ.ಎಲ್.ಶಿವಲಿಂಗೇಗೌಡ,**

ರಿಜಿಸ್ಟ್ರಾರ್‌ಮತ್ತು ಆಡಳಿತಾಧಿಕಾರಿಗಳು,

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬೆಂಗಳೂರು

____________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ /
**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ**
**ಅಧ್ಯಕ್ಷರ / ಸದಸ್ಯರ ನೇಮಕಾತಿಗೆ ಅರ್ಜಿ**
(ಅಭ್ಯರ್ಥಿಯು ತನ್ನ ಸ್ವಂತ ಕೈಬರಹದಲ್ಲಿ ಭರ್ತಿ ಮಾಡತಕ್ಕದ್ದು)

ಅ. ಅರ್ಜಿಗಳನ್ನು ಕರೆದಿರುವ ರಾಜ್ಯ ಆಯೋಗದ ಅಧಿಸೂಚನೆ ಸಂಖ್ಯೆ ಮತ್ತು ದಿನಾಂಕ:

____________________

ಆ. ಸದರಿ ಅಧಿಸೂಚನೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾಗಿರುವ ದಿನಾಂಕ:

____________________

ಇ. ಸದರಿ ಅಧಿಸೂಚನೆ ದಿನಪತ್ರಿಕೆಗಳಲ್ಲಿ ಪ್ರಕಟವಾಗಿರುವ ದಿನಾಂಕ (ಯಾವ ಪತ್ರಿಕೆ, ಯಾವ ದಿನಾಂಕದಂದು, ಯಾವ ಪುಟ ಮತ್ತು ಯಾವ ಅಂಕಣ ಎಂಬುದನ್ನು ನಿರ್ದಿಷ್ಟಪಡಿಸಿ)

____________________

____________________

ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಲಗತ್ತಿಸಿ

| | |
|---|---|
| ೧. ಅಭ್ಯರ್ಥಿಯ ಪೂರ್ಣ ಹೆಸರು<br>(ಬಿಡಿ ಅಕ್ಷರಗಳಲ್ಲಿ) | __________ __________<br>(ಸರ್‌ನೇಮ್) (ಹೆಸರು) |
| ೨. ನೀವು ನಿಮ್ಮ ಹೆಸರನ್ನು ಯಾವಾಗಲಾದರೂ ಬದಲಾಯಿಸಿಕೊಂಡಿದ್ದೀರಾ? ಹಾಗಿದ್ದಲ್ಲಿ, ಕಾರಣಗಳೊಂದಿಗೆ, ಪೂರ್ಣ ವಿವರಗಳನ್ನು ಮತ್ತು ಅದನ್ನು ಆಧರಿಸುವ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಒದಗಿಸುವುದು. (ಈ ಕಾಲಂನಲ್ಲಿ ಒದಗಿಸಿರುವ ಖಾಲಿ ಜಾಗ ಸಾಲದೇ ಇದ್ದ ಸಂದರ್ಭದಲ್ಲಿ, ಹೆಚ್ಚುವರಿ ಪುಟಗಳನ್ನು ಉಪಯೋಗಿಸಿ) | |
| ೩. ವಿಳಾಸಗಳು:<br>ಅ. ಹಾಲಿ ನಿವಾಸದ ವಿಳಾಸ, (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆಯೊಂದಿಗೆ)<br>ಆ. ನೀವು ಯಾವುದಾದರೂ ಉದ್ಯೋಗದಲ್ಲಿದ್ದೀರ ಅಥವಾ ಯಾವುದೇ ವೃತ್ತಿಯಲ್ಲಿದ್ದೀರ? ಹಾಗಿದ್ದಲ್ಲಿ ಪೂರ್ಣ ವಿವರಗಳನ್ನು ಕೊಡಿ. (ದೂರವಾಣಿ ಸಂಖ್ಯೆ, ಈ-ಮೇಲ್ ವಿಳಾಸ, ಫ್ಯಾಕ್ಸ್ ಸಂಖ್ಯೆ) | ಅ.<br>ಆ. |
| ೪. ತಂದೆಯ ಅಥವಾ ಪತಿಯ:<br>(ಅ) ಪೂರ್ಣ ಹೆಸರು<br>(ಆ) ಪ್ರಸ್ತುತ ನಿವಾಸದ ಪೂರ್ಣ ಅಂಚೆ ವಿಳಾಸ, ದೂರವಾಣಿ ಸಂಖ್ಯೆಯೊಂದಿಗೆ. (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು)<br>(ಇ) ವೃತ್ತಿ - ವಿಳಾಸ ಮತ್ತು ದೂರವಾಣಿ ಸಂಖ್ಯೆಯೊಂದಿಗೆ (ಬದುಕಿಲ್ಲದಿದ್ದರೆ, ಕೊನೆಯ ವಿಳಾಸವನ್ನು ನೀಡುವುದು) | (ಅ)<br>(ಆ)<br>(ಇ) |
| ೫. ಹುಟ್ಟಿದ ದಿನಾಂಕ (ಕ್ರಿಸ್ತಶಕದಲ್ಲಿ)<br>(ವಯಸ್ಸನ್ನು ರುಜುವಾತುಪಡಿಸಲು ಹುಟ್ಟಿದ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿಯನ್ನು ಲಗತ್ತಿಸಿ). | |
| ೬. (ಅ) ಜನ್ಮ ಸ್ಥಳ, ಜಿಲ್ಲೆ ಮತ್ತು ರಾಜ್ಯ<br>(ಆ) ಪ್ರಸ್ತುತ ನೆಲೆಸಿರುವ ಜಿಲ್ಲೆ | (ಅ)<br>(ಆ) |
| ೭. (ಅ) ನಿಮ್ಮ ಮತ<br>(ಆ) ನೀವು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ವರ್ಗಕ್ಕೆ ಸೇರಿದ್ದೀರಾ? ಹೌದು ಅಥವಾ ಇಲ್ಲ ಎಂದು ಉತ್ತರಿಸುವುದು.<br>ಉತ್ತರ ಹೌದು ಆಗಿದ್ದರೆ, ನೀವು ಸೇರಿರುವ ಸಮುದಾಯವನ್ನು ಹೆಸರಿಸುವುದು | (ಅ)<br>(ಆ) |

೮. ಎಸ್‌ಎಸ್‌ಎಲ್‌ಸಿ ಯಿಂದ ಮೊದಲ್ಗೊಂಡು ವಿದ್ಯಾರ್ಹತೆ – ವಿದ್ಯಾಭ್ಯಾಸದ ಸ್ಥಳ, ವರ್ಷ, ಶಾಲೆ/ಕಾಲೇಜಿನ ವಿವರಗಳೊಂದಿಗೆ. (ದೃಢೀಕರಿಸಿದ ಪದವಿ/ಡಿಪ್ಲೊಮಾ ಪ್ರಮಾಣ ಪತ್ರಗಳ ಪ್ರತಿ ಲಗತ್ತಿಸುವುದು)

| ಶಾಲೆ/ಕಾಲೇಜು ಮತ್ತು ವಿಶ್ವವಿದ್ಯಾಲಯಗಳ ಹೆಸರು ಮತ್ತು ಪೂರ್ಣ ವಿಳಾಸ | ಪ್ರವೇಶದ ದಿನಾಂಕ | ನಿರ್ಗಮನದ ದಿನಾಂಕ | ತೇರ್ಗಡೆಯಾದ ಪರೀಕ್ಷೆ/ಪದವಿ ಹೆಸರು |
|---|---|---|---|
| | | | |

೯. ನೀವು ಯಾವಾಗಲಾದರೂ ಉದ್ಯೋಗದಲ್ಲಿದ್ದರೆ, ವಿವರ ಒದಗಿಸಿ.

| ಹುದ್ದೆಯ ಪದನಾಮ ಅಥವಾ ಕೆಲಸದ ವಿವರಣೆ | ಅವಧಿ | | ಕಛೇರಿ / ಸಂಸ್ಥೆಯ ಪೂರ್ಣ ವಿಳಾಸ | ಉದ್ಯೋಗವನ್ನು ತ್ಯಜಿಸಲು ಕಾರಣಗಳು |
|---|---|---|---|---|
| | ಇಂದ (ದಿನಾಂಕ) | ವರೆಗೆ (ದಿನಾಂಕ) | | |
| | | | | |

| | |
|---|---|
| ೧೦. ನಿಮ್ಮ ಕಾಲೇಜು ಅಥವಾ ವಿಶ್ವವಿದ್ಯಾಲಯಕ್ಕೆ ಸಂಬಂಧಿಸದ ಮತ್ತು ನಿಮಗೆ ಸಂಬಂಧಿಕರಲ್ಲದ, ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಪಡೆದ ಚಾರಿತ್ರ್ಯ ಪ್ರಮಾಣ ಪತ್ರಗಳನ್ನು ಮೂಲ ಪ್ರತಿಯಲ್ಲಿ ಲಗತ್ತಿಸಿದ್ದೀರಾ? ಇಂತಹ ಪ್ರಮಾಣಪತ್ರ, ಈ ಅರ್ಜಿಗೆ ಸಂಬಂಧಿಸಿರುವ ನಮೂನೆಯಲ್ಲಿ ಇರತಕ್ಕದ್ದು ಮತ್ತು ಅರ್ಜಿಯ ದಿನಾಂಕದ ಹಿಂದಿನ ೬ ತಿಂಗಳ ಒಳಗೆ ಕೊಟ್ಟಂತಹ ಪ್ರಮಾಣ ಪತ್ರವಾಗಿರತಕ್ಕದ್ದು. | |
| ೧೧. (ಅ) ನೀವು ಯಾವಾಗಲಾದರೂ ಅಭಿಯೋಜನೆಗೆ ಒಳಗಾಗಿದ್ದೀರಾ, ಬಂಧನಕ್ಕೆ ಒಳಗಾಗಿದ್ದೀರಾ ಅಥವಾ ಕಟ್ಟುಪಾಡಿಗೊಳಗಾಗಿದ್ದೀರಾ/ಜುಲ್ಮಾನೆಗೊಳಗಾಗಿದ್ದೀರಾ ಅಥವಾ ಯಾವುದೇ ನ್ಯಾಯಾಲಯದಿಂದ ಯಾವುದೇ ಅಪರಾಧಕ್ಕೆ ಅಪರಾಧಿಯೆಂದು ತೀರ್ಮಾನಿಸಲ್ಪಟ್ಟಿದ್ದೀರಾ?<br>(ಆ) ಈ ಅರ್ಜಿಯನ್ನು ಹಾಕುವ ಸಮಯದಲ್ಲಿ ನಿಮ್ಮ ವಿರುದ್ಧ ಯಾವುದೇ ನ್ಯಾಯಾಲಯದಲ್ಲಿ ಯಾವುದೇ ಪ್ರಕರಣ ಬಾಕಿ ಇದೆಯೇ?<br>(ಇ) ಮೇಲಿನ (ಅ) ಅಥವಾ/ಮತ್ತು (ಆ)ಗಳಿಗೆ ಯಾವುದಕ್ಕಾದರೂ ನಿಮ್ಮ ಉತ್ತರ ಹೌದು ಎಂದಾದರೆ, ಬಂಧನ/ಜುಲ್ಮಾನೆ, ಅಪರಾಧ, ಸಿದ್ಧಿ, ದಂಡಾದೇಶ, ಮುಂತಾದ ವಿವರಗಳನ್ನು ಕೊಡುವುದು. | (ಅ)<br>(ಆ)<br>(ಇ) |
| ೧೨. (ಅ) ನಿಮ್ಮನ್ನು ಯಾವಾಗಲಾದರೂ ಸೇವೆಯಿಂದ ವಜಾ (dismiss) ಮಾಡಲಾಗಿದೆಯೇ / ತೆಗೆದು ಹಾಕಲಾಗಿದೆಯೇ (removed) / ಹೊರ ಹಾಕಲಾಗಿದೆಯೇ (terminated) / ಕಡ್ಡಾಯವಾಗಿ ನಿವೃತ್ತಿಗೊಳಿಸಲಾಗಿದೆಯೇ ಅಥವಾ ಸರ್ಕಾರಿ ಸೇವೆಗೆ ಪ್ರವೇಶ ಪಡೆಯದಂತೆ ನಿರ್ಬಂಧಿಸಲಾಗಿದೆಯೇ (debarred).<br>(ಆ) ಉತ್ತರ 'ಹೌದು' ಆದರೆ, ಪ್ರಕರಣದ ಪೂರ್ಣ ವಿವರಗಳನ್ನು ಸಂಬಂಧಪಟ್ಟ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ಒದಗಿಸತಕ್ಕದ್ದು. ದುರ್ನಡತೆಗಾಗಿ ಅಂತಹ ವ್ಯವಹರಣೆಯನ್ನು ನಿಮ್ಮ ವಿರುದ್ಧ ನಡೆಸಲಾಗಿದ್ದಲ್ಲಿ, ಅದನ್ನು ಸ್ಪಷ್ಟವಾಗಿ ತಿಳಿಸತಕ್ಕದ್ದು. | (ಅ)<br>(ಆ) |
| ೧೩. ಈ ಕೆಳಕಂಡ ದಾಖಲೆಗಳನ್ನು ಲಗತ್ತಿಸಲಾಗಿದೆಯೇ?<br>(ಅ) ವಯಸ್ಸನ್ನು ರುಜುವಾತುಪಡಿಸಲು ಜನ್ಮ ದಿನಾಂಕವನ್ನು ಒಳಗೊಂಡ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರದ ದೃಢೀಕೃತ ಪ್ರತಿ.<br>(ಆ) ಹುದ್ದೆಗೆ ಬೇಕಾದ ವಿದ್ಯಾರ್ಹತೆ/ ಅನುಭವಕ್ಕೆ ಸಂಬಂಧಿಸಿದ ಪ್ರಮಾಣ ಪತ್ರಗಳ ದೃಢೀಕೃತ ಪ್ರತಿ. (ದಯವಿಟ್ಟು ಗ್ರಾಹಕ ಹಿತರಕ್ಷಣಾ ಅಧಿನಿಯಮ, ೧೯೮೬ರ ಸೆಕ್ಷನ್ ೧೦/೧೬ನ್ನು ನೋಡಿ). | (ಅ)<br>(ಆ) |

| | |
|---|---|
| ೧೪. ಅರ್ಜಿದಾರರು ವಕೀಲರಾಗಿದ್ದಲ್ಲಿ, ಅಧ್ಯಕ್ಷರು/ ಸದಸ್ಯರಾಗಿ ಅವರ ನೇಮಕಾತಿಯ ನಂತರ, ಅವರ ಕೇಂದ್ರ ಸ್ಥಳವಾಗಬಹುದಾದ ಸ್ಥಳದಲ್ಲಿ, ಅವರ ಸಂಬಂಧಿಕರು ಯಾರಾದರೂ ವಕೀಲಿ ವೃತ್ತಿ ನಡೆಸುತ್ತಿದ್ದಾರೆಯೇ? ಹಾಗಿದ್ದಲ್ಲಿ, ವಿವರಗಳನ್ನು ಒದಗಿಸುವುದು. | |
| ೧೫. ಅರ್ಜಿದಾರನ ಈಗಿನ ವಾರ್ಷಿಕ ವರಮಾನ, ವೃತ್ತಿ ವ್ಯಾಪಾರ, ಕಸುಬು, ಉದ್ಯೋಗ, ವ್ಯವಹಾರ, ಆಸ್ತಿ ಬಾಡಿಗೆ/ಗುತ್ತಿಗೆ, ಮುಂತಾದವುಗಳಿಂದ ವಿವರಗಳನ್ನು ಒದಗಿಸುವುದು. | |
| ೧೬. ಅರ್ಥಶಾಸ್ತ್ರ, ಕಾನೂನು, ವಾಣಿಜ್ಯ, ಲೇಖಾ ಶಾಸ್ತ್ರ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಅಥವಾ ಆಡಳಿತ, ಇವುಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ನಿಮಗೆ ಇರುವ ಜ್ಞಾನ ಮತ್ತು/ಅಥವಾ ಅನುಭವ/ಸಾಮರ್ಥ್ಯ ವಿವರ ನೀಡುವುದು.<br>(ಯಾವುದಾದರೂ ಇದ್ದಲ್ಲಿ, ದೃಢೀಕರಿಸಿದ ದಾಖಲೆಗಳ ಪ್ರತಿ ಒದಗಿಸುವುದು), (ದಯವಿಟ್ಟು ಗ್ರಾಹಕ ಸಂರಕ್ಷಣಾ ಅಧಿನಿಯಮ, ೧೯೮೬ರ ಕಲಂ ೧೦/೧೬ನ್ನು ನೋಡಿ) | |

ಸೂಚನೆ: "ದೃಢೀಕೃತ ಪ್ರತಿ" ಎಂದರೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಪತ್ರಾಂಕಿತ ಅಧಿಕಾರಿ ಅಥವಾ ಸಾರ್ವಜನಿಕ ನೋಟರಿ "ಯಥಾಪ್ರತಿ" ಎಂದು ಅನುಪ್ರಮಾಣಿಸಿದ ಸಂಬಂಧಪಟ್ಟ ದಾಖಲೆಯ ಛಾಯಾಪ್ರತಿ.

**ಅರ್ಜಿದಾರರಿಂದ ಘೋಷಣೆ**

೧. ____________________ ಎಂಬ ಹೆಸರಿನವನಾದ ನಾನು, ಮೇಲ್ಕಂಡ ಮಾಹಿತಿಯು, ನನ್ನ ಅತ್ಯುತ್ತಮ ಅರಿವು ಮತ್ತು ನಂಬಿಕೆಗಳಂತೆ, ಸರಿಯಾಗಿ ಹಾಗೂ ಸಂಪೂರ್ಣವಾಗಿರುವುದಾಗಿ ಈ ಮೂಲಕ ಘೋಷಿಸುತ್ತೇನೆ. ನೇಮಕಾತಿಗೆ ಯೋಗ್ಯತೆಯನ್ನು ದುರ್ಬಲಗೊಳಿಸುವ ಯಾವುದೇ ಸಂದರ್ಭಗಳು ನನಗೆ ತಿಳಿದಿರುವುದಿಲ್ಲ.

೨. ನಾನು ಗ್ರಾಹಕ ಸಂರಕ್ಷಣಾ ಅಧಿನಿಯಮ, ೧೯೮೬ (ಕೇಂದ್ರ ಅಧಿನಿಯಮ ಸಂಖ್ಯೆ: ೬೮/೧೯೮೬) ಮತ್ತು ಅದರಡಿ ರಚಿಸಲಾಗಿರುವ ರಾಜ್ಯ ಮತ್ತು ಕೇಂದ್ರದ ನಿಯಮಾವಳಿಗಳನ್ನು ಓದಿರುತ್ತೇನೆ. ಆ ಕಾನೂನುಗಳ ಅಡಿ ನಾನು *ಜಿಲ್ಲಾ ವೇದಿಕೆಯ / *ರಾಜ್ಯ ಆಯೋಗದ *ಅಧ್ಯಕ್ಷ / *ಸದಸ್ಯನಾಗಿ ನೇಮಕವಾಗಲು ಅರ್ಹತೆ ಹೊಂದಿರುವುದಾಗಿ ಘೋಷಿಸುತ್ತೇನೆ.

೩. ನಾನು ಬಯಸುತ್ತಿರುವ ಸ್ಥಾನವು ಪೂರ್ಣಕಾಲಿಕ ಉದ್ಯೋಗ ಎಂಬುದನ್ನು ನಾನು ಅರಿತಿದ್ದೇನೆ. *ಅಧ್ಯಕ್ಷ / *ಸದಸ್ಯನಾಗಿ ನಾನು ನೇಮಕಗೊಂಡರೆ, ನನ್ನ ಪೂರ್ಣ ಕಾಲವನ್ನು ಅದಕ್ಕೆ ಸಮರ್ಪಿಸಲು ವಾಗ್ದಾನ ಮಾಡುತ್ತೇನೆ.

೪. *ಅಧ್ಯಕ್ಷ / *ಸದಸ್ಯನಾಗಿ ನನ್ನ ಕಾರ್ಯಗಳ ಮೇಲೆ ಪ್ರತೀಕೂಲ ಪರಿಣಾಮ ಬೀರುವಂತಹ ಯಾವುದೇ ಹಣಕಾಸು ವ್ಯವಹಾರವನ್ನು ಅಥವಾ ಇತರ ಹಿತಾಸಕ್ತಿಯನ್ನು ನಾನು ಹೊಂದಿಲ್ಲ ಮತ್ತು ಹೊಂದುವುದಿಲ್ಲ.

*೫. ನಾನು ವಕೀಲ ವೃತ್ತಿಯನ್ನು ____________ ನಲ್ಲಿ (ಸ್ಥಳವನ್ನು ನಮೂದಿಸಬೇಕು) ನಡೆಸುತ್ತಿದ್ದು, ಈ ಅರ್ಜಿಯನ್ನು ಸಲ್ಲಿಸುತ್ತಿರುವ *ಅಧ್ಯಕ್ಷ / *ಸದಸ್ಯನಾಗಿ ಕಾರ್ಯ ನಿರ್ವಹಿಸುವ ಅವಧಿಗೆ, ಆ ವೃತ್ತಿಯನ್ನು ತ್ಯಜಿಸುತ್ತೇನೆ.

* ಅನ್ವಯಿಸದಿದ್ದಲ್ಲಿ ಹೊಡೆದುಹಾಕಿ

ಸ್ಥಳ :

ದಿನಾಂಕ : **ಅರ್ಜಿದಾರರ ಸಹಿ**

**ಸಹಬಂಧ**

**ಚಾರಿತ್ರ್ಯ ಪ್ರಮಾಣ ಪತ್ರ**

ಶ್ರೀ ____________________, ಇವರ ಮಗನಾದ/ ಮಗಳಾದ/ಹೆಂಡತಿಯಾದ ಶ್ರೀ/ಶ್ರೀಮತಿ ____________________ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ/ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ಅಧ್ಯಕ್ಷ/ಸದಸ್ಯ ಹುದ್ದೆಗೆ ಅರ್ಜಿದಾರರಾಗಿದ್ದು, ಇವರು ನನಗೆ ಕಳೆದ ________ ವರ್ಷ ಮತ್ತು ________ ತಿಂಗಳಿನಿಂದ ಪರಿಚಿತರಾಗಿರುವರೆಂದು ದೃಢೀಕರಿಸಿದೆ. ಅರ್ಜಿದಾರರು ಒಳ್ಳೆಯ ನೈತಿಕ ಚಾರಿತ್ರ್ಯ ಮತ್ತು ಖ್ಯಾತಿಯನ್ನು ಹೊಂದಿದವರಾಗಿದ್ದಾರೆ. ಗ್ರಾಹಕ ಸಂರಕ್ಷಣಾ ಅಧಿನಿಯಮ, ೧೯೮೬ (ಕೇಂದ್ರ ಅಧಿನಿಯಮ ೬೮/೧೯೮೬)ರ ಕಲಂ ೧೦/೧೬ನ್ನು ಓದಿದ ನಂತರ, ಅರ್ಜಿದಾರರು ಅಂತಹ ಅಧ್ಯಕ್ಷ / ಸದಸ್ಯತ್ವಕ್ಕೆ ನೇಮಕವಾಗಲು ಅನರ್ಹರಾಗುವಂತಹ ಯಾವುದೇ ಪೂರ್ವ ನಡತೆ ಹೊಂದಿಲ್ಲವೆಂದು ನಾನು ದೃಢೀಕರಿಸುತ್ತೇನೆ.

ಶ್ರೀ/ಶ್ರೀಮತಿ ____________________ (ಅರ್ಜಿದಾರರ ಹೆಸರು) ನನಗೆ ಸಂಬಂಧಿಕರಲ್ಲ.

____________________

ಸ್ಥಳ : ಸಹಿ ಮತ್ತು ಹೆಸರು; ಮನೆಯ ಪೂರ್ಣ ವಿಳಾಸ ಮತ್ತು ಕಛೇರಿ/ವೃತ್ತಿಯ ಪೂರ್ಣ ವಿಳಾಸ ಹಾಗೂ

ದಿನಾಂಕ : ಮನೆಯ ಮತ್ತು ಕಛೇರಿಯ ದೂರವಾಣಿ ಸಂಖ್ಯೆ

ಆಯುಕ್ತರ ಕಾರ್ಯಾಲಯ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಆನಂದರಾವ್ ವೃತ್ತ, ಬೆಂಗಳೂರು - 560 009.

ಅಧಿಕೃತ ಜ್ಞಾಪನಾಪತ್ರ

ಸಂಖ್ಯೆ : ಆಕುಕ/17/ಆಯುಕ್ತ/2005-06, ದಿನಾಂಕ :13ನೇ ಜೂನ್ 2005

**ವಿಷಯ:** ಇಲಾಖೆಯ ಜಿಲ್ಲೆಯ ಮತ್ತು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಸ್ನಾತಕೋತ್ತರ ಮತ್ತು ಡಿಪ್ಲೊಮಾ ಪದವಿ ಹೊಂದಿರುವ ವೈದ್ಯರುಗಳನ್ನು ಗುತ್ತಿಗೆ ಆಧಾರದ ಮೇಲೆ ತಜ್ಞ ವೈದ್ಯರಾಗಿ ನೇಮಕಾತಿ ಬಗ್ಗೆ

**ಉಲ್ಲೇಖ:** ದಿನಾಂಕ 08/06/2005 ರಲ್ಲಿ ಸರ್ಕಾರದಿಂದ ಅನುಮೋದಿಸಲ್ಪಟ್ಟಿದೆ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಜಿಲ್ಲೆಯ ಮತ್ತು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಸ್ನಾತಕೋತ್ತರ ಮತ್ತು ಡಿಪ್ಲೊಮಾ ಪದವಿ ಹೊಂದಿರುವ ವೈದ್ಯರುಗಳನ್ನು ಗುತ್ತಿಗೆ ಆಧಾರದ ಮೇಲೆ ತಜ್ಞ ವೈದ್ಯರಾಗಿ ನೇಮಕಾತಿ ಮಾಡಲು ದಿನಾಂಕ 18/05/2005 ರಂದು ನೇರ ಸಂದರ್ಶನ ನಡೆಸಲಾಗಿದ್ದು, ಈ ಕೆಳಕಾಣಿಸಿರುವ ವೈದ್ಯರುಗಳನ್ನು ಅವರ ತಜ್ಞತೆಗೆ ಅನುಗುಣವಾಗಿ ಮಾಹೆ ಸಂಚಿತ ವೇತನ ರೂ. 13,000/– ಕ್ಕೆ ಅವರುಗಳ ಹೆಸರಿನ ಮುಂದೆ ಸೂಚಿರುವ ಸ್ಥಳಗಳಲ್ಲಿ ಗುತ್ತಿಗೆ ಆಧಾರದ ಮೇಲೆ ಸರ್ಕಾರದ ನಿರ್ದೇಶನದ ಮೇರೆಗೆ ತಾತ್ಕಾಲಿಕವಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಂತೆ ನೇಮಿಸಲಾಗಿದೆ:

ಅಲ್ಲದೇ ಗುತ್ತಿಗೆ ಆಧಾರದ ನೇಮಕಾತಿ ಮಾಡಿರುವ ಅಭ್ಯರ್ಥಿಗಳು ಅಜ್ಞಾ ಪತ್ರಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸಂಬಂಧಿಸಿದಂತೆ ಸ್ಪಷ್ಟಪಡಿಸಿರುವ ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧರಾಗುವ ಷರತ್ತಿಗೆ ಒಳಪಟ್ಟಿರುತ್ತದೆ.

**ಷರತ್ತು ಮತ್ತು ನಿಬಂಧನೆಗಳು**

1) ಗುತ್ತಿಗೆ ಆಧಾರದ ಮೇಲೆ ಮಾಡುವ ನೇಮಕಾತಿ 1 ವರ್ಷದ ಅವಧಿಗೆ ಮಾತ್ರ ಎಂದು ನಿಗದಿಪಡಿಸಿರುವುದನ್ನು ಒಪ್ಪಿಕೊಳ್ಳತಕ್ಕದ್ದು
2) ಈ ಅಜ್ಞಾ ಪತ್ರ ತಲುಪಿದ 07 ದಿನಗಳೊಳಗಾಗಿ ಅಭ್ಯರ್ಥಿಯು ನೇಮಕಾತಿ ಮಾಡಿರುವ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗಬೇಕು. ಹಾಜರಾಗದಿದ್ದಲ್ಲಿ, ನೇಮಕಾತಿಯನ್ನು ಯಾವುದೇ ಸೂಚನೆ ಇಲ್ಲದೆ ರದ್ದುಪಡಿಸಲಾಗುವುದು
3) ಅಭ್ಯರ್ಥಿಯು ಕೆಲಸಕ್ಕೆ ಹಾಜರಾಗುವಾಗ ಎಲ್ಲಾ ಮೂಲ ದಾಖಲೆಗಳನ್ನು ಅಂದರೆ ತಜ್ಞ ವೈದ್ಯಾಧಿಕಾರಿ ಹುದ್ದೆಗೆ ಗೊತ್ತುಪಡಿಸಿರುವ ವಿದ್ಯಾರ್ಹತೆಯ ಅಂಕಪಟ್ಟಿ, ಜನ್ಮ ದಿನಾಂಕದ ದಾಖಲೆ ಇತ್ಯಾದಿಗಳನ್ನು ಆಯಾ ಜಿಲ್ಲೆಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ / ಜಿಲ್ಲಾ ಶಸ್ತ್ರಚಿಕಿತ್ಸಕರುಗಳ ಮುಂದೆ ಹಾಜರುಪಡಿಸತಕ್ಕದ್ದು
4) ವೃಂದ ಮತ್ತು ನೇಮಕಾತಿ ನಿಯಮಗಳ ರೀತ್ಯ ನಿಗದಿತ ವಯೋಮಿತಿಯಲ್ಲಿರತಕ್ಕದ್ದು
5) ಆಯಾ ಪ್ರವರ್ಗಗಳಲ್ಲಿ ಮೀಸಲಾತಿ ಪಡೆಯಲು ಅಭ್ಯರ್ಥಿಗಳು ತಮ್ಮ ಜಾತಿ / ಜಾತಿ ಮತ್ತು ಆದಾಯ ಪ್ರಮಾಣಪತ್ರಗಳನ್ನು ಸಲ್ಲಿಸತಕ್ಕದ್ದು (ಸಾಮಾನ್ಯ ವರ್ಗ ಅಭ್ಯರ್ಥಿಗಳು ಹೊರತುಪಡಿಸಿ).
6) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರು / ಜಿಲ್ಲಾ ಶಸ್ತ್ರಚಿಕಿತ್ಸಕರು ಹಾಗೂ ಆರೋಗ್ಯ ಮತ್ತು ಕುಟುಂಬ ಸೇವೆಗಳ ನಿರ್ದೇಶನಾಲಯವು ಕಾಲಕಾಲಕ್ಕೆ ಅವರುಗಳಿಗೆ ವಹಿಸಿದ ಕರ್ತವ್ಯ ಜವಾಬ್ದಾರಿಗಳನ್ನು ತಪ್ಪದೇ ನಿರ್ವಹಿಸತಕ್ಕದ್ದು
7) ಅಭ್ಯರ್ಥಿಗಳು ಕೇಂದ್ರಸ್ಥಾನಗಳಲ್ಲಿ ತಂಗಿದ್ದು, 24 ಘಂಟೆಗಳಲ್ಲೂ ಯಾವುದೇ ತುರ್ತು ಸೇವೆಗೆ/ ರಾತ್ರಿ ಪಾಳಿಗೆ / ತುರ್ತು ವಿಭಾಗಗಳಲ್ಲಿ ಲಭ್ಯವಿರತಕ್ಕದ್ದು
8) ತೃಪ್ತಿಕರವಾದ ಕರ್ತವ್ಯ ನಿರ್ವಹಣೆ ಷರತ್ತಿಗೆ ಒಳಪಟ್ಟು ಪ್ರತಿ ತಿಂಗಳಿಗೆ ರೂ. 13,000/– ಸಂಚಿತ ಮೊತ್ತವನ್ನು ಮಾತ್ರ ನೀಡಲಾಗುತ್ತದೆ
9) ಗುತ್ತಿಗೆ ಆಧಾರದ ನೇಮಕಾತಿಯನ್ನು ಯಾವುದೇ ಸಮಯದಲ್ಲಿ, ಯಾವುದೇ ಕಾರಣವಿಲ್ಲದೆ ಅಥವಾ ಸರ್ಕಾರ ಉಭಯ ಪಕ್ಷಗಳು ಒಂದು ತಿಂಗಳ ನೋಟೀಸು ಕೊಟ್ಟು ಅಥವಾ ನೋಟೀಸಿನ ಬದಲಾಗಿ ರೂ. 13,000/– ಮೊತ್ತವನ್ನು ನೀಡಿ ಪರ್ಯಾವಸನಗೊಳಿಸುವ ಷರತ್ತಿಗೆ ಒಳಪಟ್ಟಿರುತ್ತದೆ
10) ತಾತ್ಕಾಲಿಕ ಸರ್ಕಾರಿ ನೌಕರನಿಗೆ ಸಿಗುವಂತಹ ಎಲ್ಲಾ ವೈದ್ಯಕೀಯ ಸೌಲಭ್ಯಗಳನ್ನು ಪಡೆಯಲು ಒಪ್ಪಿಕೊಳ್ಳತಕ್ಕದ್ದು
11) ದುರ್ನಡತೆಯಿಂದಾಗಿ ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಅದನ್ನು ಸರ್ಕಾರಕ್ಕೆ ತುಂಬಿಕೊಡುವ ಷರತ್ತಿಗೆ ಬದ್ಧರಾಗತಕ್ಕದ್ದು
12) ಖಾಯಂ ನೇಮಕಾತಿಗಾಗಲೀ, ವಿಶ್ರಾಂತಿ ವೇತನಕ್ಕಾಗಲೀ, ನಿವೃತ್ತಿ ಉಪದಾನಕ್ಕಾಗಲೀ, ವೇತನ ಶ್ರೇಣಿಗಾಗಲೀ ಅಥವಾ ಯಾವುದೇ ಭತ್ಯೆಗಳನ್ನು ಪಡೆಯುವ ಹಕ್ಕನ್ನು ಹೊಂದಿರುವುದಿಲ್ಲವೆಂಬ ಷರತ್ತಿಗೆ ಬದ್ಧರಾಗತಕ್ಕದ್ದು
13) ಮೇಲಿನ ಷರತ್ತುಗಳ ಘೋಷಣಾಪತ್ರವನ್ನು ಸಂಸ್ಥೆಯ ಮುಖ್ಯಸ್ಥರಿಗೆ ಸಲ್ಲಿಸತಕ್ಕದ್ದು

| Sl.No. | Name and Address | Speciality | Place of Posting |
|---|---|---|---|
| ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವಂತೆ | | | |

ಆಯುಕ್ತರು
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು

**ಷರತ್ತು ಮತ್ತು ನಿಬಂಧನೆಗಳಿಗೆ ಬದ್ಧರಾಗುವ ಘೋಷಣಾ ಪ್ರಮಾಣಪತ್ರ**

1) ಗುತ್ತಿಗೆ ಆಧಾರದ ಮೇಲೆ ಮಾಡುವ ನೇಮಕಾತಿ 1 ವರ್ಷದ ಅವಧಿಗೆ ಮಾತ್ರ ಎಂದು ನಿಗದಿಪಡಿಸಿರುವುದನ್ನು ನಾನು ತಿಳಿದು ಒಪ್ಪಿಕೊಂಡಿರುತ್ತೇನೆ
2) ವೃಂದ ಮತ್ತು ನೇಮಕಾತಿ ನಿಯಮಗಳ ರೀತ್ಯ ನಿಗದಿತ ವಯೋಮಿತಿಯಲ್ಲಿರುತ್ತೇನೆ
3) ನಾನು ____________ ಜಾತಿ, ___________ ಪ್ರವರ್ಗ ಮೀಸಲಾತಿಗೆ ಸಂಬಂಧಿಸಿದಂತೆ ಜಾತಿ / ಜಾತಿ ಮತ್ತು ಆದಾಯ ಪ್ರಮಾಣಪತ್ರಗಳನ್ನು ಸಲ್ಲಿಸಿರುತ್ತೇನೆ

4) ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಯವರು / ಜಿಲ್ಲಾ ಶಸ್ತ್ರಚಿಕಿತ್ಸಕರು ಹಾಗೂ ಆರೋಗ್ಯ ಮತ್ತು ಕುಟುಂಬ ಸೇವೆಗಳ ನಿರ್ದೇಶನಾಲಯವು ಕಾಲಕಾಲಕ್ಕೆ ಅವರುಗಳಿಗೆ ವಹಿಸಿದ ಕರ್ತವ್ಯ ಜವಾಬ್ದಾರಿಗಳನ್ನು ತಪ್ಪದೇ ನಿರ್ವಹಿಸಲು ಒಪ್ಪಿಕೊಂಡಿರುತ್ತೇನೆ
5) ನಾನು ಕೇಂದ್ರಸ್ಥಾನಗಳಲ್ಲಿ ತಂಗಿದ್ದು, 24 ಘಂಟೆಗಳಲ್ಲೂ ಯಾವುದೇ ತುರ್ತು ಸೇವೆಗೆ/ ರಾತ್ರಿ ಪಾಳಿಗೆ / ತುರ್ತು ವಿಭಾಗಗಳಲ್ಲಿ ಲಭ್ಯವಿದ್ದು, ಸೇವೆ ಸಲ್ಲಿಸುವ ಷರತ್ತಿಗೆ ಒಪ್ಪಿಕೊಂಡಿರುತ್ತೇನೆ
6) ತೃಪ್ತಿಕರವಾದ ಕರ್ತವ್ಯ ನಿರ್ವಹಣೆ ಷರತ್ತಿಗೆ ಒಳಪಟ್ಟು ಪ್ರತಿ ತಿಂಗಳಿಗೆ ರೂ. 13,000/– ಸಂಚಿತ ಮೊತ್ತವನ್ನು ಮಾತ್ರ ಪಡೆಯಲು ಒಪ್ಪಿಕೊಂಡಿರುತ್ತೇನೆ
7) ಗುತ್ತಿಗೆ ಆಧಾರದ ನೇಮಕಾತಿಯನ್ನು ಯಾವುದೇ ಸಮಯದಲ್ಲಿ, ಯಾವುದೇ ಕಾರಣವಿಲ್ಲದೆ ಅಥವಾ ಸರ್ಕಾರ ಉಭಯ ಪಕ್ಷಗಳು ಒಂದು ತಿಂಗಳ ನೋಟೀಸು ಕೊಟ್ಟು ಅಥವಾ ನೋಟೀಸಿನ ಬದಲಾಗಿ ರೂ. 13,000/– ಮೊತ್ತವನ್ನು ನೀಡಿ ಪರ್ಯಾವಸನಗೊಳಿಸುವ ಷರತ್ತಿಗೆ ಒಪ್ಪಿಕೊಂಡಿರುತ್ತೇನೆ
8) ತಾತ್ಕಾಲಿಕ ಸರ್ಕಾರಿ ನೌಕರನಿಗೆ ಸಿಗುವಂತಹ ಎಲ್ಲಾ ವೈದ್ಯಕೀಯ ಸೌಲಭ್ಯಗಳನ್ನು ಪಡೆಯಲು ಒಪ್ಪಿಕೊಂಡಿರುತ್ತೇನೆ
9) ದುರ್ನಡತೆಯಿಂದಾಗಿ ಸರ್ಕಾರಕ್ಕೆ ನಷ್ಟ ಉಂಟಾದಲ್ಲಿ ಅದನ್ನು ಸರ್ಕಾರಕ್ಕೆ ತುಂಬಿಕೊಡುವ ಷರತ್ತಿಗೆ ಒಪ್ಪಿಕೊಂಡಿರುತ್ತೇನೆ
10) ಖಾಯಂ ನೇಮಕಾತಿಗಾಗಲೀ, ವಿಶ್ರಾಂತಿ ವೇತನಕ್ಕಾಗಲೀ, ನಿವೃತ್ತಿ ಉಪದಾನಕ್ಕಾಗಲೀ, ವೇತನ ಶ್ರೇಣಿಗಾಗಲೀ ಅಥವಾ ಯಾವುದೇ ಭತ್ಯೆಗಳನ್ನು ಪಡೆಯುವ ಹಕ್ಕನ್ನು ಹೊಂದಿರುವುದಿಲ್ಲವೆಂಬ ಷರತ್ತಿಗೆ ಒಪ್ಪಿಕೊಂಡಿರುತ್ತೇನೆ

ಸ್ಥಳ :
ದಿನಾಂಕ : ಅಭ್ಯರ್ಥಿ ಸಹಿ

## ANNEXURE
## APPOINTMENT OF SPECIALISTS ON CONTRACT BASIS

| Sl. No. | Name and Address | Speciality | Place of Posting |
|---|---|---|---|
| 1 | SUNIL KUMAR K.R.<br>C/o B.C. SHANKARA LINGAPPA, NO. 1094/66, 9TH MAIN, PRAKASHNAGAR, BANGALORE - 21. | MD(GM) | DH., TUMKUR |
| 2 | VAGESH KUMAR S<br>C/O THIPPESWAMY T., CHANDRU NILAYA, NEAR WATER TANK, GOPALPURA ROAD, CHITRADURGA- 577 501 | MD(GM) | GH., HOLALKERE, CHITRADURGA DIST |
| 3 | NIRANJANA B.H.<br>MARUTHI NURSINGHOME, HOSADURGA-577 527 | MD(GM) | GH., MOLKALMURU, CHITRADURGA DIST |
| 4 | ASHALAKSHMI P<br>W/O DR. JAYANTH DESAI, NO. 477, 6TH MAIN, 2ND STAGE, WEST OF CHORD ROAD, BANGALORE- 86 | DNB(GM) | GH., BHAGEPALLI, KOLAR DIST |
| 5 | VANI R.<br>NO. 225/15, BYRAPPA BLOCK, 2ND MAIN, TYAGARAJANAGAR, BANGALORE- 28 | MS(OBG),MRCOG-I | GH., SIRSI, UTTARA KANNADA DIST. |
| 6 | PUSHPALATHA K<br>DOOR NO. 216, B2 WING, YAMUNA BLOCK, NATIONAL GAMES COMPLEX, KORAMANGALA, BANGALORE | MS(OBG) | DH., MADIKERE |
| 7 | VIJAY KUMAR C.R<br>NO. 963/1, 1ST MAIN, 2ND CROSS, VINOBANAGAR, DAVANGERE. | MS(OBG) | GH., KADUR, CHICKMAGALUR DIST |
| 8 | PRASHANTH S<br>DOOR NO. 579, IV MAIN, ANJANEYA LAYOUT, DAVANGERE - 577 004. | MS(OBG) | PHC., KANNANGI, SHIMOGA DIST |
| 9 | SWARNALATHA<br>C/o SRI M.J. RAO, RTD. SPM, 'JAYABHUVANA', ODALA BILAL ROAD, UJIRE - 574 240 | MD(OBG) | CHC., BELTHANGADI, DAKSHINA KANNADA DIST |
| 10 | PRABHU R<br>MIG-1, MARUTI TEMPLE, GANGOTRI LAYOUT, MYSORE-570 009 | MD(OBG) | DH., KARWAR |

| Sl. No. | Name and Address | Speciality | Place of Posting |
|---|---|---|---|
| 11 | KAVITA MAHADEVAPPA<br>U.A.S, STAFF QUARTERS, A-4,<br>HEBBAL, BANGALORE- | MD(OBG) | GH., BANGARPET, KOLAR DIST |
| 12 | GIRIJA M.K<br>NO. 412, 14TH 'A' MAIN ROAD, 1ST BLOCK, BASAVESHWARNAGAR 3RD STAGE, BANGALORE - 79. | MD(OBG) | GH., CHIKKANAYANAHALLI, TUMKUR DIST |
| 13 | ANITA B<br>NO. 8, 2ND FLOOR, NATASHA PENTA APT, 1ST CROSS, INFANTRY ROAD,<br>BANGALORE- 560 001 | MD(OBG) | GH., K.G.F., KOLAR DIST |
| 14 | PREETI V SHETTAR<br>C/O ANNAPURNA HOSPITAL, SEDAM ROAD, JAGAT,<br>GULBARGA- 585 105 | MD(OBG) | GH., KUSHTAGI, KOPPAL DIST |
| 15 | KABADI YOGINDRAKUMAR MANOHAR<br>HEALTH-CAMP, OPP. K.C.R. PARK, BETAGERI POST,<br>GADAG - 582 102. | DNB(OBG) | CHC., LAKSHMESHWARA, GADAG DIST |
| 16 | SHOBHA S<br>NO. C. 30, 2ND CROSS, SAMEERAPURA,<br>BANGALORE- 18 | DGO(DNB) | GH., PAVAGADA, TUMKUR DIST |
| 17 | ANNAM MAHESH GOPAL<br>32/16, MAHANT LAYOUT, 1ST CROSS, K.G. NAGAR,<br>BANGALORE - 19. | DGO / DNB | GH., SRINIVASPURA, KOLAR DIST |
| 18 | MAHESHA R. GOVANKOP<br>NO. 207, ROYAL MANSION, SHANTI COLONY (SOUTH)<br>VIDYANAGAR, HUBLI | DGO | CHC., GULEDAGUDDA, BAGALKOT DIST |
| 19 | SAVITHA K.R<br>NO. 158/C, 4TH MAIN,<br>3RD STAGE, 3RD BLOCK, BASAVESHWARNAGAR,<br>BANGALORE - 560 079. | DGO | CHC., NAGAMANGALA, MANDYA DIST |
| 20 | SUMATHI M<br>NO. 13, (OLD NO. 40),<br>"SRI GANESHA KRUPA",<br>6TH CROSS, PRIYADARSHINI LAYOUT, MOODALAPALYA, NAGARBHAVI MAIN ROAD,<br>BANGALORE- 72 | DGO | CHC., TALAKAD, MYSORE DIST |
| 21 | SHARADA BAI BHARATNUR<br>H. NO. 280, VIDYANAGAR,<br>GULBARGA | DGO | GH., ALAND, GULBARGA DIST |
| 22 | VIJAYALAXSHMI B.H<br>BENDEBEMBLI POST,<br>SHAHPUR TQ, GULBARGA DIST | DGO | GH., LINGASAGUR, RAICHUR DIST |
| 23 | VANISHREE N<br>NO-782/C, 1ST CROSS, 1ST MAIN, MAHALAKSHMI LAYOUT,<br>BANGALORE- 86 | DGO | GH., MALLAVALLI, MANDYA DIST |
| 24 | HANAMANT L VASANAD<br>C/O L.G. VASANAD, AT & POST, KHAJJIDONI TALUK & DIST<br>BAGALKOT | DGO | GH., MANVI, RAICHUR DIST |

| Sl. No. | Name and Address | Speciality | Place of Posting |
|---|---|---|---|
| 25 | SHARANAMMA BIRADAR<br>PLOT NO. 28, SIDDESHWAR NAGAR, DARGA ROAD, GULBARGA- | DGO | GH., SEDAM, GULBARGA DIST |
| 26 | MAHADEVI S PATIL<br>KIRAN MATERNITY HOSPITAL, MAIN ROAD, SHAHAPUR, - 585 223 | DGO | GH., SORAPURA, GULBARGA DIST |
| 27 | VIJAYAKUMARI T<br>NO. 238, SATHYARTRI, 13TH MAIN, IIND BLOCK, 1ST STAGE, B.S.K BANGALORE- 560 050 | DGO | GH., SORBHA, SHIMOGA DIST |
| 28 | MANJUNATH G.N.<br>NO. 17, HIG-II, G-3, KHB EXTENSION, HOOTAGALLY, MYSORE | DGO | GH., VIRAJPET, KODAGU DIST |
| 29 | SUVARNA VIJAY MITKARI<br>C/o Dr. MALLIKARJUN TEGNOOR, HOUSE NO. 3-379, 'TEGNOOR NIVAS', GAJIPUR, GULBARGA | DGO | PHC., HEBBAL, GULBARGA DIST |
| 30 | ROOPA C.B.<br>W/O DR SHIVAKUMAR B.N., BASAWESWARA HOSPITAL, T.B ROAD, KADUR TQ., CHICKMAGALUR | DGO | PHC., KOPPA, CHICKMAGALUR DIST |
| 31 | SANGEETA R. PATIL<br>C/o Dr. RAJASHEKHAR PATIL, MS(GS), H. NO. LIG 6, NEW KHB COLONY, OPP. BUS STAND, SHANTINAGAR, GULBARGA | DGO | PHC., MADANAHIPPERGI, GULBARGA DIST |
| 32 | SHUBHA M.T<br>PROPRIETOR, SRI SHARADA TEXTILES, MAIN ROAD, HOSADURGA - 577527. | DGO | PHC., SRINGERI, CHICKMAGALUR DIST |
| 33 | ARAVINDA G<br>W/O Dr. SURENDRABABU, PHC., SALGUNDA, SINDANUR, RAICHUR | DGO | PROJECT HOSPITAL, MUNIRABAD, KOPPAL DIST |
| 34 | ANNAPURNA<br>H. NO. M/116, NIJALINGAPPA COLONY, RAICHUR DIST. - 584 101. | DGO | DH., RAICHUR |
| 35 | POORNIMA K<br>W/O YATHIRAJU T., 166, MOKSHA MARGA, SIDDARTHA NAGAR, MYSORE- 11 | DGO | GH., SRIRANGAPATNA , MANDYA DIST |
| 36 | NAGARAJ G<br>VIDUPASHILAYAM, OPP. HEAD POST OFFICE, MAIN ROAD, COWL BAZAR, BELLARY | MS(GS) &MCH(PASTIC SURGEORY) | GH., MAGADI, BANGALORE (RURAL) |
| 37 | NIMBOOR VIVEK<br>MIG-8, KHB COLONY, BIDAR-585 401 | MS(GS) | CHC., MANNAYAKAHALLI, BIDAR DIST |
| 38 | SATISH B. ANANTPUR<br>PITRUKRUPA', MALLIKARJUNNAGAR, ASHRAM ROAD, BIJAPUR - 586 103. | MS(GS) | DH., GULBARGA |

| Sl. No. | Name and Address | Speciality | Place of Posting |
|---|---|---|---|
| 39 | JAYASHEKHAR M<br>SIDDAIAHPURAM POST,<br>KOLLEGAL TALUK,<br>CHAMRAJNAGAR DIST- 571 499 | MS(GS) | GH., K.R.PET., MANDYA DIST |
| 40 | MALLIKARJUNA V<br>FLAT NO. 106, GAYATHRI<br>APARTMENTS, LAKSHMIPURAM,<br>MYSORE - 570 004. | MS(GS) | GH., PANDAVPURA, MANDYA DIST |
| 41 | CHANDRASHEKARAIAH K.C.<br>C/O M.C. LINGAPPA,<br>ASSISTANT MASTER, 5TH CROSS,<br>DADAPPER LAYOUT, SONDE<br>KOPPA ROAD, NELAMANGALA,<br>BANGALORE RURAL DIST | MS(GS) | GH., SOMWARPET, KODAGU DIST |
| 42 | CHIMKODE RAVINDRA<br>SHASHI KUNJ', 10-2/179,<br>SANGAMESHWAR COLONY,<br>GULBARGA - 585 103. | MS(GS) | PHC., HEBBAL, GULBARGA DIST |
| 43 | VIKRAM S. SIDARADDI<br>H. NO. 19, KHBC, BIDAR - 585 401. | MS(GS) | PHC., KALAGI, GULBARGA DIST |
| 44 | NAVEEN S<br>NO. 12, 11TH MAIN, 5TH BLOCK 9,<br>JAYANAGAR, BANGALORE- 41 | MS(GS) | SNR HOSPITAL, KOLAR |
| 45 | ARUN M<br>NO. 51, HIG, KHB COLONY,<br>1ST STAGE, 1ST "A" MAIN ROAD,<br>BASAVESHWARANAGAR,<br>BANGALORE- 79 | MS(GS) | SNR HOSPITAL, KOLAR |
| 46 | MAHESH K<br>PLOT NO. 81, DOOR NO. 6,<br>GANESH COLONY, SN PET<br>EXTENSION, BELLARY | MD(PAED) | DH., KOPPAL |
| 47 | MANJUNATH S<br>D.NO. 33/2, 2ND MAIN ROAD,<br>MARENAHALLI, VIJAYNAGAR,<br>BANGALORE - 560 040. | MD(PAED) | GH., SHIKARIPUR, SHIMOGA DIST |
| 48 | SUNIL KUMAR A<br>NO. 1903, 11TH CROSS, 2ND MAIN<br>R.P.C. LAYOUT, VIJAYANAGAR,<br>2ND STAGE, BANGALORE-40 | DCH(PAED) | GH., SANDUR, BELLARY DIST |
| 49 | LOHITH S NADIG<br>DOOR NO. 3213/3, 10TH MAIN,<br>5TH CROSS, M.C.C. 'B' BLOCK,<br>DAVANGERE - 577 004. | DCH / MHA | DH., GADAG |
| 50 | SREENIVASA V<br>DOOR NO. 57/29, 3RD CROSS,<br>M.J. NAGAR, NEAR LIC OFFICE,<br>DAM ROAD, HOSPET,<br>BELLARY DIST. - 583 201. | DCH | CHC., CHIKKAJOGIHALLI, BELLARY DIST |
| 51 | ALLAPPA V. BANAKAR<br>NO. 2746, 17TH 'A' CROSS,<br>BANASHANKARI 2ND STAGE,<br>BANGALORE - 560 070. | DCH | GH., ATHANI, BELGUAM DIST |
| 52 | HEMALATHA V.G.<br>4012/A, VII CROSS, GAYATHRI<br>NAGAR, BANGALORE- 560 021 | DCH | GH., CHIKKANAYANAHALLI, TUMKUR DIST |

| Sl. No. | Name and Address | Speciality | Place of Posting |
|---|---|---|---|
| 53 | GANGADHARA K.O<br>OBALESHWARA NILAYA,<br>4TH CROSS, SRINIVASNAGAR,<br>HADADI ROAD, DAVANGERE. | DCH | GH., GOKAK, BELGAUM DIST |
| 54 | AVINASH G.O<br>NH 13, MAVINAKATTE (VG)<br>CHANNAGIRI TQ,<br>DAVANGERE DIST. | DCH | GH., HOSANAGARA, SHIMOGA DIST |
| 55 | VEERABHADRAPPA SOBANI<br>BAZAR ROAD, AFZALPUR,<br>GULBARGA DIST. | DCH | GH., ILKAL, BAGALKOTE DIST |
| 56 | SURESH BABU<br>C/o KENDKUR COMPLEX, NEAR<br>KALYAN MANTAP, YADGIR TQ,<br>GULBARGA DIST. | DCH | GH., MANVI, RAICHUR DIST |
| 57 | RAMESH T<br>NO. 217, K.K. ROAD, T.<br>DASARAHALLI, BANGALORE - 57. | DCH | GH., SIDLAGHATTA, KOLAR DIST |
| 58 | VIJAY KUMAR R<br>198, 14TH MAIN ROAD, NAGENDRA<br>BLOCK, BANASHANKARI 3RD<br>STAGE, BANGALORE - 560 050. | DCH | KNTB HOSPITAL, KOLAR |
| 59 | RAMAKRISHNA K.R.<br>NO. K. 133, TEMPLE STREET,<br>KALLAHALLI, MANDYA-571 401 | DA,DNB | DH., MADIKERE |
| 60 | SHRIDHAR N. EKBOTE<br>C/o SHASHIKANT EKBOTE,<br>PLOT NO. 1, G.K. APARTMENTS,<br>OPP. MOHAN LODGE,<br>M.S.K. MILLS ROAD,<br>GULBARGA - 585 102. | DA | DH., BAGALKOT |
| 61 | SUSHEELA G. SAWKAR<br>C/o Dr. MAHESA PATEL, ASHWINI<br>HOSPITAL, NEAR BUS STAND,<br>SHAHPUR, GULBARGA DIST. | DA | GH., AURAD, BIDAR DIST |
| 62 | VIJAYA KUMAR<br>KAMAKSHI NILAYA, URGADU<br>MATTER ROAD, SHIMOGA- 577 203 | DA | GH., BHADRAWATHI, SHIMOGA DIST |
| 63 | BHARATHI N<br>DOOR NO. 861/6, 2ND MAIN,<br>2ND STAGE, "D" BLOCK,<br>RAJAJINAGAR, BANGALORE-10 | DA | GH., DODDABALAPURA, BANGALORE (RURAL) |
| 64 | RAVIKUMAR V.N.<br>S.R.C.I. ANAJAVADI,<br>CHIKKAMUDUVADI (POST),<br>KANAKAPURA TQ.,<br>BANGALORE- 567 117 | DA | GH., H.D.KOTE., MYSORE DIST |
| 65 | RAGHUNATH ALADAKATTI<br>H. NO. 24, KHB COLONY,<br>RANIBENNUR,<br>HAVERI DIST. - 581 115. | DA | GH., HARIHARA, DAVANGERE DIST |
| 66 | REVANNA B.V.<br>BANANDUR BIDADI,<br>RAMANAGARA, BANGALORE<br>RURAL-562 109 | DA | GH., K.R.PET., MANDYA DIST |

| Sl. No. | Name and Address | Speciality | Place of Posting |
|---|---|---|---|
| 67 | SUDHIR B.N<br>NO. 637/21 (42), VISPANTHI NILAYAM, 14TH 'A' MAIN ROAD, GOKULA 1ST PHASE, MATHIKERE 1ST STAGE, BANGALORE - 560 054. | DA | GH., KORATEGERE, TUMKUR DIST |
| 68 | GIRISH G. PATIL<br>C/o B.S. PATIL, VINUTA NIVAS, H. NO. 120, VIVEKNAGAR, BDA WEST, BIJAPUR | DA | GH., MUDDEBIHAL, BIJAPUR DIST |
| 69 | LAKSHMI N.K.<br># 51/84, 22ND CROSS, 20TH MAIN, MARENAHALLI MAIN ROAD, VIJAYANAGAR, BANGALORE | DA | GH., PANDAVAPURA, MANDYA DIST |
| 70 | GOVINDARAJ J<br>33RD WARD, A.C. OFFICE ROAD, HOSPET- 583 201 | DA | GH., SANDUR, BELLARY DIST |
| 71 | SUNITA VEERDHAR PAL<br>C/O A.B. MUGUTKAR, H. NO.1-1/6, GADA COMPLEX GARDEN ROAD, NEAR TANGA NURSING HOME GULBARGA | DA | GH., SHORAPURA, GULBARGA DIST |
| 72 | MAHENDRAPPA H<br>NO. 1658-8, OPP CANARA BANK., VIDYANAGAR, DAVANGERE- 577 005 | DA | GH., SORABA, SHIMOGA DIST |
| 73 | BHAGYA BAI<br>C/o SANJANA ORTHO CENTRE, CHURCH ROAD, CHITRADURGA - 577 501. | DA | GH., TARIKERE, CHICKMAGALUR DIST |
| 74 | PRATHIBHA J.P<br>331/1, DAVALARA BANGALORE NURSING HOME ROAD, VINAYAKANAGAR, TIPTUR, TUMKUR DIST. - 572 202. | DA | GH., TIPTUR TUMKUR DIST |
| 75 | SEEMA TIWARI<br>C/O ANILPRASAD PANDEY, H NO. 10-2-98/A, ANAND NAGAR, NEAR BANALE HOSPITAL, GULBARGA | DA | GH., YADGIR, GULBARGA DIST |
| 76 | MALLANAGOUDA P. PATIL<br>BEHIND SHANTI SERVICE STATION, GUNDAMMA CAMP GANGAVATI, KOPPAL DIST. - 583 227. | DMRD | DH., KOPPAL |
| 77 | SHIVANGOUDA S PATIL<br>KARUNA NILAYA, GODUTAI NAGAR, GULBARGA | DMRD | DH., MADIKERE |
| 78 | RAVINDRA N RAJAPUR<br>H. NO. 4,-600, NEAR SHIV MANDIR., M.B., NAGAR, GULBARGA- | DMRD | DH., UDUPI |
| 79 | SYED MANSOOR AHMED<br>NO. 215, 6TH MAIN ROAD, OFFICAL COLONY, 1ST BLOCK, EAST JAYANAGAR, BANGALORE- 560 011 | DMRD | GH., CHANNAPATNA, BANGALORE (RURAL) |

| Sl. No. | Name and Address | Speciality | Place of Posting |
|---|---|---|---|
| 80 | SURESHA K.S.<br>NALLUR (POST) CHANNAGIRI TALUK, DAVANGERE DIST- 577 221 | MS(OPTHO) | DH., DAVANGERE |
| 81 | SHILPA Y.D<br>DOOR NO. 4663, 14TH CROSS, V.V. NAGAR, KALLAHALLI, MANDYA- | MS(OPTHO) | GH., MADDUR, MANDYA DIST |
| 82 | NAGENDRAPPA B<br>SWAMY EYE HOSPITAL, OPP. PATIL NURSING HOME, GANGAVATHI, KOPPAL DIST. | MS(OPTH) | GH., KUDLIGI, BELLARY DIST |
| 83 | MAHANTAPPA NANDYAL<br>PLOT NO. 46, RAGHOJI LAYOUT, SEDAM ROAD, GULBARGA | DOMS / DNB | DH., GULBARGA |
| 84 | UMESHA R<br>NO. 142, KAPILA MARGA, SIDDHARTHA LAYOUT, MYSORE - 11. | DOMS | GH., ARASIKERE, HASSAN DIST |
| 85 | SHARANABASAPPA ABDULPUR<br>C/o PROFESSOR NAGARAJ, BOORAGAMAHALAHALLI, OOLAVADI POST, CHINTAMANI TQ, KOLAR DIST. | DOMS | GH., BAGEPALLI, KOLAR DIST |
| 86 | SHOBHA GOUDAR<br>NO. 35, BRINDAVAN LAYOUT, VIDYANAGAR, HUBLI - 580 021 | DOMS | GH., HIREKERURU, HAVERI DIST |
| 87 | NANDEPPA B. MUNNOLLI<br>C/o Y.B. MUNNOLLI, BASAV SADAN, OPP. KEB, MUDHOL - 587 313 | DOMS | GH., SANDUR, BELLARY DIST |
| 88 | VISHWANATH NAYAK<br>VRL UPSTAIRS, OPP DWARAKANATH KALAMADIR, R.P. ROAD, SAGAR- 577 401, SHIMOGA | DOMS | GH., SHIKARIPUR, SHIMOGA DIST |
| 89 | SUDHIR BABU PADGUL<br>H. NO. 8-11-553, NGO's HOUSING COLONY, OPP. SBH COLONY, NEAR KPTCL OFFICE, BIDAR - 585 401. | DO / DNB (OPHTHALMOLOGY) | GH., SIRAGUPPA., BELLARY DIST |
| 90 | SHRINIVAS BHAT U<br>GOPALA NIVASA, INNANJE POST, UDUPI TQ. & DIST. | MD(PSY) | DH., KARWAR |
| 91 | SANJAY H.C.<br>CHANDRAGIRI, E-80-81, 1ST, 1ST BLOCK, 2ND CROSS, GOPALA GOUDA EXTENSION, SHIMOGA | DPM(PSYCHIATRIC) | DH., SHIMOGA |
| 92 | VENKATESH B.K.<br>TULJA BHAVANI TEMPLE ROAD, VI CROSS, GANDHI NA BAZAAR, SHIMOGA | DPM | DH., MADIKERE |
| 93 | SHREEDHAR K.B<br>H.NO. 9, 10TH CROSS, S.S. PURAM, TUMKUR - 2 | DPM | DH., TUMKUR |
| 94 | SUJATA SAJJAN<br>C/o C.V. SAJJAN, GHYANI PLOT STATION ROAD, BIJAPUR - 586 101. | MD(PATH) | DH., BELGAUM |

| Sl. No. | Name and Address | Speciality | Place of Posting |
|---|---|---|---|
| 95 | HALAMANDGE VIJAY<br>H. NO. 9-1-39/1, NEAR LIC OFFICE,<br>NANDI COLONY, BIDAR. | MD(PATH) | DH., GULBARGA |
| 96 | THEJASVI KRISHNAMURTHY<br>NO. 1305, 11TH MAIN ROAD,<br>VIJAYNAGAR, BANGALORE - 40. | MD(PATH) | DH., KARWAR |
| 97 | RAJESH PARA<br>H. NO. 8-9-60, NEAR DIST JAIL,<br>S.V.P NAGAR, BIDAR- 585 401 | MD(PATH) | DH., RAICHUR |
| 98 | SRIKOUSTHUBHA M.S<br>1210, SHANTI NILAYA,<br>VIVEKANANDA ROAD,<br>ASHOKNAGAR,<br>MANDYA DIST. - 571 401. | MD(PATH) | DH., SHIMOGA |
| 99 | PADMA S.R<br>NO. 40, 59TH CROSS,<br>BHASYAM CIRCLE, RAJAJINAGAR,<br>BANGALORE - 560 010. | DCP/DIPLOMAT OF NB(PATH) | DH., CHITRADURGA |
| 100 | HEMALATHA R<br>W/O R. RAJAKUMAR, # 657, H.R.S.<br>NILAYA, 10TH MAIN, 7TH CROSS,<br>A1 BLOCK, 3RD STAGE,<br>VIJAYANAGAR, MYSORE- 570 017 | DCP | DH., BIJAPUR |
| 101 | SRI RAMA K<br>976, SRINATHA, 23RD MAIN,<br>4TH BLOCK, JAYANAGAR,<br>BANGALORE- 41 | DCP | DH., CHICKMAGALUR |
| 102 | CHETHANA MANJUNATH B.S.<br># 347, K.R. PURAM, EXTENSION,<br>BANGALORE- 560 036 | DCP | DH., KOLAR |
| 103 | KUMUDINI T.S.<br>"SRI VENKATESHWARA",<br>1ST MAIN, 7TH CROSS,<br>LEFT TURN, BASAVESHWARA<br>NAGAR, BELLARY | DBACT | DH., BELGAUM |
| 104 | RUDRAMUNESHWARA SWAMY B.P<br>NO. 82, 17TH CROSS, 22ND MAIN<br>ROAD, 6TH PHASE, J.P. NAGAR,<br>BANGALORE - 560 078. | MD(MICRO) | DH., DAVANGERE |
| 105 | MOHAN D.R.<br>THEJASHWI', OLD NCC OFFICE<br>ROAD, ASHOKNAGAR 1ST CROSS,<br>TUMKUR | MD(MICRO) | DH., HASSAN |
| 106 | SREEDHARA H.G<br>NO. 143, 'GEETHANJALI',<br>2ND 'A' CROSS, MARUTHINAGAR,<br>TUMKUR - 2. | MD(MICRO) | DH., MANGALORE |
| 107 | ASHOKANAND D.V.<br># 1390, 4TH CROSS, 2ND PHASE,<br>CHANDRA LAYOUT,<br>BANGALORE- 40 | MD(MIC) | DH., KOLAR |
| 108 | SOMASHEKAR N<br>CHINAKAVAJRA, AT POST<br>MADHUGIRI TALUK, TUMKUR | DTCD, RNTCP | DH., HASSAN |
| 109 | JAYAPRAKASH T<br>1ST MAIN, 5TH CROSS,<br>J.C. EXTENSION,<br>HARIHAR- 577 601, DAVANGERE- | DTCD | DH., DAVANGERE |

| Sl. No. | Name and Address | Speciality | Place of Posting |
|---|---|---|---|
| 110 | ARUN B.J<br>NO. 672, 2ND MAIN, 2ND PHASE,<br>BSK 3RD STAGE,<br>BANGALORE - 85. | DTB & CHEST | TB HOSPITAL (B)<br>HOSUR, MANDYA |
| 111 | VEERESH M.R.,<br>NO. 422, 15TH MAIN ,<br>M.C. LAYOUT, VIJAYNAGAR,<br>BANGALORE- 40 | MD(FM) | DH., HASSAN |
| 112 | PADMANABHA T<br>NO. 98, 2ND FLOOR, GOVINDAPPA<br>ROAD, BASAVANAGUDI,<br>BANGALORE - 560 004. | DFM | DH., MADIKERE |
| 113 | HARISH MURTHY,<br>1-1-65, 'SHREE HARINIVAS',<br>UDAYNAGAR, STATION AREA,<br>RAICHUR DIST. - 584 101. | MS(ORTHO) &<br>DNB(ORTHO) | DH., KOPPAL |
| 114 | MRUTHYUNJAYA T.D,<br>PANCHAJANYA, 1ST CROSS,<br>SIDARAMESHWARA EXTENSION,<br>BATAVADI, TUMKUR - 572 103. | MS(ORTHO) | DH., MANGALORE |
| 115 | MANJAPPA C.N,<br>NO. 977, 66TH CROSS,<br>5TH BLOCK, RAJAJINAGAR,<br>BANGALORE - 10. | MS(ORTHO) | GH., SOMWARPET.,<br>KODAGU |
| 116 | SOMANATH B. MEGALAMANI,<br>SENIOR RESIDENT,<br>DEPT. OF ENT, JIPMER,<br>PONDICHERRY - 6. | MS(ENT) & DNB | DH., KARWAR |
| 117 | MALLIKARJUN S. TEGNOOR,<br>TEGNOOR, 3-379, TEGNOOR<br>NIVAS, GAZIPUR,<br>GULBARGA - 585 101. | MS(ENT) | DH., HASSAN |
| 118 | BHASKARA MOGERA N,<br>SRI BABA NILAYA, COURT ROAD,<br>UDUPI - 576 101. | MS(ENT) | DH., MADIKERI |
| 119 | SHYAMALA V,<br>NO. 367, 5TH MAIN, HAL 3RD<br>STAGE, INDIRANAGAR, NEW<br>THIPPASANDRA, BANGALORE - 75. | DLO | DH., H.D.KOTE.,<br>MYSORE |
| 120 | SAVITHRA K.L,<br>NO. 106, 3RD CROSS, 5TH BLOCK,<br>BSK 3RD STAGE, 3RD PHASE,<br>BANGALORE - 560 085. | DLO | GH., GUNDLUPET.,<br>CHAMRAJNAGAR |
| 121 | DIGAMBAR R. HEROOR,<br>C/o BHAVANI MEDICAL POLA<br>COMPLEX, CINEMA ROAD,<br>SEDAM POST, GULBARGA DIST. | DLO | GH., LINGASAGUR.,<br>RAICHUR |
| 122 | BHAGYASHRI K,<br>ABHAYA NILAYA, GANDHINAGAR,<br>KAVOOR, MANGALORE - 15. | DLO | GH., VIRAJPET.,<br>KODAGU |

PR-916

Commissioner
Health and Family Welfare Services

## ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಶಿವಮೊಗ್ಗ ಜಿಲ್ಲೆ

**ಪ್ರಕಟಣೆ ಸಂ: ಜಿಪಂಶಿ:ಜಿಸಕಅ:ವಿ7:ಸಿಆರ್:1:2005-06, ದಿನಾಂಕ: 17ನೇ ಜೂನ್ 2005**

**ವಿಷಯ:** 2005-06ನೇ ಸಾಲಿಗೆ ಪರಿಶಿಷ್ಟ ಜಾತಿ: ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣ ತರಬೇತಿಗಾಗಿ ಅರ್ಜಿ ಆಹ್ವಾನಿಸುವ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶದ ಸಂ: ಎಸ್‌ಡಬ್ಲ್ಯೂಎಲ್ 68:ಎಸ್‌ಇಡಬ್ಲ್ಯೂ 89: ದಿನಾಂಕ: 2.11.1990.

2005-06ನೇ ಸಾಲಿನಲ್ಲಿ ಸಮಾಜ ಕಲ್ಯಾಣ ಇಲಾಖೆ ವತಿಯಿಂದ ಆಡಳಿತ ನ್ಯಾಯಾಧೀಕರಣದಲ್ಲಿ ನಾಲ್ಕು ವರ್ಷಗಳ ತರಬೇತಿಗಾಗಿ ಶಿವಮೊಗ್ಗ ಜಿಲ್ಲೆಯ 7 ಪರಿಶಿಷ್ಟ ಜಾತಿ: ಮತ್ತು 3 ಪರಿಶಿಷ್ಟ ವರ್ಗಗಳ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಕ್ರಿಯಾ ಯೋಜನೆಯಲ್ಲಿ ಗುರಿ ನಿಗದಿಪಡಿಸಲಾಗಿದೆ. ಆದ್ದರಿಂದ ಪರಿಶಿಷ್ಟ ಜಾತಿ: ವರ್ಗಗಳ ಕಾನೂನು ಪದವೀಧರರಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿತ ಅರ್ಜಿ ನಮೂನೆಗಳನ್ನು **ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿ, ಗಾಂಧಿನಗರ ಮುಖ್ಯ ರಸ್ತೆ, ಶಿವಮೊಗ್ಗ,** ಇಲ್ಲಿ ಕಛೇರಿ ಸಮಯದಲ್ಲಿ ಪಡೆಯಬಹುದು, ಭರ್ತಿ ಮಾಡಿ ಅಗತ್ಯ ದಾಖಲಾತಿಗಳೊಂದಿಗೆ **ದಿನಾಂಕ: 20.7.2005** ರ ಒಳಗೆ ಸಲ್ಲಿಸಬೇಕು. ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ನಿಬಂಧನೆಗಳು**

1. ಅಭ್ಯರ್ಥಿಗಳು ಶಿವಮೊಗ್ಗ ಜಿಲ್ಲೆಯವರಾಗಿದ್ದು ಪರಿಶಿಷ್ಟ ಜಾತಿ: ವರ್ಗಕ್ಕೆ ಸೇರಿದವರಾಗಿರಬೇಕು.
2. ಕಾನೂನು ಪದವಿಯಲ್ಲಿ ತೇರ್ಗಡೆ ಹೊಂದಿ ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕಕ್ಕೆ ಎರಡು ವರ್ಷಗಳು ಮೀರಿರಬಾರದು.
3. ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 18 ರಿಂದ 35 ವರ್ಷದ ಮಿತಿಯೊಳಗಿರಬೇಕು.
4. ತರಬೇತಿಯನ್ನು ಶಿವಮೊಗ್ಗ ಜಿಲ್ಲೆಯಲ್ಲಿಯೇ ಪಡೆಯಬೇಕು.
5. ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ಮೂಲಕ ಸಂದರ್ಶನಕ್ಕೆ ಕರೆದು ಅಭ್ಯರ್ಥಿಗಳನ್ನು ತರಬೇತಿಗಾಗಿ ಆಯ್ಕೆ ಮಾಡಲಾಗುವುದು.
6. ಆಯ್ಕೆಯಾದ ಅಭ್ಯರ್ಥಿಗಳು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳ ಕಾಲಕ್ಕೆ ಕಡಿಮೆ ಇಲ್ಲದಂತೆ ವಕೀಲಿ ವೃತ್ತಿಯಲ್ಲಿ ಸೇವೆ ಸಲ್ಲಿಸಿರುವ ನ್ಯಾಯವಾದಿಗಳ ಬಳಿ ತರಬೇತಿ ಪಡೆಯಬೇಕು.
7. ಈ ತರಬೇತಿಯ ಅವಧಿಯಲ್ಲಿ ಹಾಜರಾತಿ ಹಾಗೂ ದಿನಚರಿಗಳನ್ನು ಪಡೆದು ಅದನ್ನು ಪರಿಶೀಲಿಸಿ, ಪ್ರತಿ ಮಾಹೆ ರೂ. 1000.00 (ರೂ. ಒಂದು ಸಾವಿರ) ಗಳ ದರದಲ್ಲಿ ಮಾತ್ರ ತರಬೇತಿ ಭತ್ಯೆಯನ್ನು ಹಾಜರಾತಿ ಅನುಸರಿಸಿ ಪಾವತಿಸಲಾಗುವುದು.
8. ಈ ತರಬೇತಿಗಾಗಿ ಅರ್ಜಿ ಸಲ್ಲಿಸಲು ಇಚ್ಛಿಸುವ ಅಭ್ಯರ್ಥಿಗಳು ಕೊನೆಯ ದಿನಾಂಕದ ಒಳಗೆ ಭರ್ತಿ ಮಾಡಿದ ಅರ್ಜಿಯೊಂದಿಗೆ ಎಸ್.ಎಸ್.ಎಲ್.ಸಿ. ಹಾಗೂ ಅದಕ್ಕಿಂತ ಮೇಲ್ಪಟ್ಟ ಎಲ್ಲಾ ಪರೀಕ್ಷೆಗಳ ಅಂಕ ಪಟ್ಟಿಗಳು, ಜಾತಿ, ದೃಢೀಕರಣ ಪತ್ರಗಳನ್ನು ಸಕ್ಷಮ ಅಧಿಕಾರಿಗಳಿಂದ ಪಡೆದು ನ್ಯಾಯವಾದಿ ವೃತ್ತಿಯನ್ನು ಪ್ರಾರಂಭಿಸಲು ಬೇಕಾಗುವ ಬಾರ್ ಕೌನ್ಸಿಲ್‌ನ ನೋಂದಣಿ ಪ್ರಮಾಣ ಪತ್ರದ ಪ್ರತಿಯೊಂದಿಗೆ ದ್ವಿ ಪ್ರತಿಯಲ್ಲಿ ಅರ್ಜಿ ಸಲ್ಲಿಸಬೇಕು.
9. ಅಭ್ಯರ್ಥಿಯು ಯಾವುದೇ ಸರ್ಕಾರಿ, ಅರೆ ಸರ್ಕಾರಿ ನೌಕರಿಯಲ್ಲಿರಬಾರದು. ವಿದ್ಯಾಭ್ಯಾಸ ಮಾಡುತ್ತಿರಬಾರದು.
10. ಆಯ್ಕೆ ಅಭ್ಯರ್ಥಿಯು ಸುಳ್ಳು ದಾಖಲಾತಿ ನೀಡಿ ಆಯ್ಕೆಯಾಗಿದ್ದು ಕಂಡುಬಂದಲ್ಲಿ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು. ಮತ್ತು ಈ ಸಂಬಂಧವಾಗಿ ಪಡೆದ ಶಿಷ್ಯ ವೇತನವನ್ನು ಬಡ್ಡಿ ಸಮೇತ ಹಿಂದಿರುಗಿಸಬೇಕಾಗುವುದು.
11. ಅಭ್ಯರ್ಥಿಗಳು ಸರ್ಕಾರದಿಂದ ರೂಪಿಸಲಾದ ನಿಯಮಗಳಿಗೆ ಬದ್ಧನಾಗಿರುವ ಬಗ್ಗೆ ತರಬೇತಿ ಅವಧಿಯು ನಾಲ್ಕು ವರ್ಷವಿದ್ದು, ತರಬೇತಿಯನ್ನು ಮಧ್ಯದಲ್ಲಿ ಬಿಡದಿರುವ ಬಗ್ಗೆ ಒಂದು ಮುಚ್ಚಳಿಕೆ ಪತ್ರವನ್ನು ರೂ. 20.00 ಬೆಲೆಯ ಛಾಪಾ ಕಾಗದದಲ್ಲಿ ಬರೆದುಕೊಡಬೇಕು. ಒಂದು ವೇಳೆ ತರಬೇತಿ ಮಧ್ಯದಲ್ಲಿ ಬಿಟ್ಟರೆ ಅದುವರೆಗೂ ಪಡೆದಿರುವ ಶಿಷ್ಯವೇತನವನ್ನು ವಾರ್ಷಿಕ ಶೇ. 10 ರ ಬಡ್ಡಿದರದಲ್ಲಿ ಸರ್ಕಾರಕ್ಕೆ ಮರುಪಾವತಿಸಲು ಬದ್ಧರಾಗಿರಬೇಕು. ಇಲ್ಲವಾದಲ್ಲಿ ಭೂಕಂದಾಯ ಬಾಕಿ ವಸೂಲಿಯಂತೆ ವಸೂಲಿ ಮಾಡಲಾಗುವುದು.
12. ಆಯ್ಕೆಯಾದ ಅಭ್ಯರ್ಥಿಯು ನಿಗದಿತ ದಿನಾಂಕದೊಳಗಡೆ ಹಾಜರಾಗದಿದ್ದರೆ ಅಂತಹವರ ಆಯ್ಕೆಯನ್ನು ರದ್ದುಪಡಿಸಲಾಗುವುದು.
13. ಅಭ್ಯರ್ಥಿಯು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.
14. ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಮತ್ತು ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಜಿಲ್ಲಾ ಸಮಾಜ ಕಲ್ಯಾಣಾಧಿಕಾರಿ,
ಶಿವಮೊಗ್ಗ ಜಿಲ್ಲೆ.

ಪಿ.ಆರ್. 958

## UNIVERSITY OF AGRICULTURAL SCIENCES, BANGALORE
### Administrative Office, GKVK, Bangalore-560 065
### NOTIFICATION
### No. AO/Rectt[SP]/ Adv. Backlog-Steno/2005-06, Dated 8th June 2005

**Sub:** Recruitment of Backlog posts of Service Personnel in the UAS, Bangalore.

**Ref:**
1. Government Notification No. DPAR 13 SBC 2001, Dated 21.11.2001.
2. Notification No. AO/ RT/ 11/ 22/ 2002-03, Dated 7.5.2002 of UAS, Bangalore.
3. Notification No. AO/ Rectt[SP]/ Adv. Current & Backlog/ 2003-04, dated: 11.6.2003 of UAS, Bangalore.
4. Minutes of the 307th Board Meeting held on 25.1.2005. (Addition Item No. 2)

Applications are invited in the prescribed form from the candidates who are qualified as on the last date prescribed for receipt of filled in Applications for filling up of the post of Stenographer [Backlog posts] of Service Personnel in the University of Agricultural Sciences, Bangalore.

The procedure for selection of candidates for the Backlog post advertised will be in accordance with the Karnataka Civil Service [unfilled vacancies reserved for the persons belonging to Scheduled Castes and the Scheduled Tribes] [Special Recruitment] Rules, 2001, Notified vide No. DPAR 13 SBC 2001, dated 21.11.2001.

| Sl.No. | Name of the post and Scale of Pay | No. of Posts | Classification |
|---|---|---|---|
| 1 | Stenographer<br>Rs. 5200-9580 | Backlog-2<br>[Advertised 3rd time] | SC-1<br>ST-1 |

**Qualifications prescribed for the post of Stenographer:**

a. A Degree of a recognised University.
b. Should have passed Senior Typewriting in English and Kannada and Senior Shorthand Examination in English conducted by the Board of Commercial Examinations of Government of Karnataka.
c. Should have good command in English and Kannada.
d. Should have atleast 3 years of experience as Stenographer in an Office of Government or a Statutory Bodies including handling of files.
e. Pass in Kannada Shorthand is a desirable qualification.
f. Knowledge of read and write Kannada is essential.

**General Instructions:**

1. (i) Application Fee Rs. 100/- [Rupees One hundred only] for Stenographer post [for SC/ST Category only].
   (ii) A xerox copy of Caste Certificate issued by the Competent Authority should be submitted in support of claim for reservation.
2. Number of vacancies notified is subject to alteration and the University reserves the right to increase or decrease the number.
3. Application Form may be obtained after Publication of Notification in the Karnataka Gazette on payment of the prescribed fee in person from the undersigned either in the form of Demand Draft drawn in favour of the Comptroller, University of Agricultural Sciences, Bangalore-65, Demand Draft purchased on or after the date of Notification are accepted.
   [Timings: on working days: 9.00 AM to 3.30 PM on Saturday: 9.00 AM to 12.00 Noon]
4. Maximum age prescribed for the posts of Service Personnel is 40 years [this does not apply to UAS in-service candidates].
5. Applications can also be obtained by post by sending the requisite Demand Draft with self addressed envelop [size: 12" x 4" affixing the Postal Stamp of the value of Rs. 12/-] from the undersigned. The SC/ST candidates shall submit a attested xerox copy of the valid Caste Certificate as indicated at Instructions.
6. Ex-Servicemen or Children of Defence Personnel of SC/ST Category killed or disabled in action are exempted from payment of Application Fee provided they produce the appropriate Certificate.
7. The last date for obtaining blank Application Form is 30 days from the date of Notification in the Karnataka Gazette. The date of Notification in the Gazette will be informed in leading News Papers.
8. Filled in Applications together with copies of testimonials should be sent so as to reach the undersigned within 45 days from the date of Notification in the Karnataka Gazette.
9. Only attested copies of the Certificates should be enclosed along with the Application.
10. Applications received after the last and incomplete Applications will be rejected.
11. The appointment is subject to fulfillment of all eligibility conditions will be governed by the Statutes, Regulations etc., of the University.

By Order
PD - 56
**Administrative Officer,**
University of Agricultural Sciences,
GKVK Campus, Bangalore-560 065.

**ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತ**

**ಕಾರ್ಯಪಾಲಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಹಾಸನ**

**ಪ್ರಕಟಣೆ**

**ಸಂಖ್ಯೆ: ಎಇಇ(ಕ)/ಟಿ-133/1192-94, ದಿನಾಂಕ: 14ನೇ ಜೂನ್ 2005**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28, ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ:-

| | |
|---|---|
| **ಕೆಲಸದ ಹೆಸರು** | ಹಾಲಿ ಇರುವ ಸಕಲೇಶಪುರ 66 ಕೆ.ವಿ. ಡಿ.ಸಿ. ವಿದ್ಯುತ್ ಮಾರ್ಗದಿಂದ - ಉದ್ದೇಶಿತ ಕೆ.ಎಮ್.ಹೆಚ್.ಎಸ್-1 ಗೆ 66 ಕೆ.ವಿ. ಡಿ.ಸಿ. (ಲಿಲೋ) ಹೊಸ ವಿದ್ಯುತ್ ಮಾರ್ಗ ನಿರ್ಮಾಣ. |
| **ಉದ್ದೇಶ** | ಹಾಸನ ಜಿಲ್ಲೆ ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮಪಡಿಸಲು ಹಾಗೂ ತಯಾರಾದ ವಿದ್ಯುತ್ತನ್ನು ರವಾನೆ ಮಾಡುವ ಸಲುವಾಗಿ |
| **ಹಾದು ಹೋಗುವ ಪ್ರದೇಶ** | ಹೆಗ್ಗದ್ದೆ-ಮಾರನಹಳ್ಳಿ, ಕಾಗಿನೆರೆ ಆರ್.ಎಫ್. |
| **ಅಂದಾಜು ವೆಚ್ಚ** | ರೂ. 50.00 ಲಕ್ಷಗಳು |

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985(13) ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ **ಕಾರ್ಯಪಾಲಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ** ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ),
ಪಿ.ಡಿ. 57 ಬೃಕಾವಿ/ಕವಿಪ್ರನಿನಿ/ ಹಾಸನ

**KARNATAKA POWER TRANSMISSION CORPORATION LIMITED**
**Office of the Executive Engineers Elecl.,**
**Major Works Division, KPTCL, N.R. Mohalla, Mysore-7**
**DRAFT NOTIFICATION**
**No. EEE/AEE (O)/MWD/MYS/2005-06/780-84, dated 13th May 2005**

Karnataka Power Transmission Corporation Limited has formulated a scheme under section 28 and clause (e) of section 18 of the Electricity supply Act 1948 and the scheme is herewith published in pursuance of section 29(2) of the said Act, this notification is issued for information of the license holders and any other concerned persons. Particulars of the scheme are as hereunder:

| | |
|---|---|
| **Name of the Work** | Construction of 66KV LILO line from proposed 66 KV Cowdalli-Maratalli SC line to proposed 66/11 KV S/S at Ramapura. |
| **Salient Features and** | To Improve Voltage condition & To meet future Load growth of Ramapura & its Surrounding areas. |
| **Areas Passing through** | Ramapura (Gejjalanatta) Limits |
| **Approximate length of the line** | 1.20 Km |
| **Approximate Cost** | 15 Lakhs |

KPTCL shall have and exercise all powers which the telegraph authorities possess under part-III of the Indian Telegraph Act 1985 (13 of 1985) for implementation of the above said scheme. Any objections regarding the above scheme shall be sent to the Executive Engineer Elecl., Major works Division, KPTCL, Mysore-7 within two months from the date of Publication of this notification for KPTCL's, pursuance.

**Executive Engineer Elecl.,**
PD - 58 KPTCL, M.W. Division, Mysore.

**ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತ**
**ಕಾರ್ಯಪಾಲಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಹಾಸನ**
**ಪ್ರಕಟಣೆ**
**ಸಂಖ್ಯೆ: ಎಇಇ(ಕ)/ಟಿ-151/592-93, ದಿನಾಂಕ: 12ನೇ ಮೇ 2005**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28, ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ:-

| | |
|---|---|
| **ಕೆಲಸದ ಹೆಸರು** | ಹಾಲಿ ಇರುವ ಬಿ.ಜಿ. ನಗರ 66/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರದಿಂದ ಹಾಲಿ ಇರುವ ಹಿರಿಸಾವೆ 66/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರಕ್ಕೆ ಉದ್ದೇಶಿತ 66 ಕೆ.ವಿ. ಹೊಸ ವಿದ್ಯುತ್ ಮಾರ್ಗ ನಿರ್ಮಾಣ |
| **ಉದ್ದೇಶ** | ಚನ್ನರಾಯಪಟ್ಟಣ ತಾಲ್ಲೂಕು, ಶ್ರವಣಬೆಳಗೊಳ ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮಪಡಿಸಿ ಸ್ಥಿರವಾದ ವಿದ್ಯುತ್ ಪೂರೈಸುವ ಸಲುವಾಗಿ |
| **ಹಾದು ಹೋಗುವ ಪ್ರದೇಶ** | ಗೋವಿನಘಟ್ಟ, ಚಂದಾಪುರ, ದಿಡಗ, ಚಾಮನಕೊಪ್ಪಲು, ಹೊಸಹಳ್ಳಿ, ಬೊಮ್ಮನಹಳ್ಳಿ, ಅವರೇಹಳ್ಳಿ, ಹಡೇನಹಳ್ಳಿ, ಚಿಕ್ಕನಪುರ, ಲಾಲನಕೆರೆ, ಕಿರೀಸಾವೆ, ಕೋತನಹಳ್ಳಿ, ಕೋಲನಹಳ್ಳಿ, ಹಿರೀಸಾವೆ. |
| **ಅಂದಾಜು ವೆಚ್ಚ** | ರೂ. 210.12 ಲಕ್ಷ |

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985(13) ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ **ಕಾರ್ಯಪಾಲಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ** ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ),**
ಪಿ.ಡಿ. 59 ಬೃಕಾವಿ/ಕವಿಪ್ರನಿನಿ/ ಹಾಸನ

**ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಅಭಿಯಂತರರು (ವಿ), ಬೃಹತ್ ಕಾಮಗಾರಿ ವಿಭಾಗ, ವಿದ್ಯುತ್‌ನಗರ, ಹುಬ್ಬಳ್ಳಿ-580 024**

**ಯೋಜನಾ ಪ್ರಕಟಣೆ**

**ಸಂಖ್ಯೆ: 605/ಇಇ/ಬೃಕಾವಿ/ಹುಬ್ಬಳ್ಳಿ/04-05, 692-95, ದಿನಾಂಕ: 5ನೇ ಮೇ 2005**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28, ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳು ಕೆಳಕಂಡಂತಿದೆ.

**ಕೆಲಸದ ಹೆಸರು:** 110 ಕೆ.ವಿ. ಹುಬ್ಬಳ್ಳಿ, ಬಾಗಲಕೋಟೆ ಜೋಡು ವಿದ್ಯುತ್ ಮಾರ್ಗದಿಂದ ಟ್ಯಾಪ್ ಮಾಡಿ 110 ಕೆ.ವಿ. ಜೋಡು ವಿದ್ಯುತ್ ಮಾರ್ಗವನ್ನು 110 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರ, ಪವರ್ ಹೌಸ್ ಕಾಂಪೌಂಡ್ ಗಂಟಿಕೇರಿ, ಹುಬ್ಬಳ್ಳಿಗೆ ಸಂಪರ್ಕ ಕಲ್ಪಿಸಲು ನಿರ್ಮಾಣ ಮಾಡಲಿಕ್ಕೆ ಯೋಜಿಸಲಾಗಿದೆ. ಈ ಮಾರ್ಗವು ಯಲ್ಲಾಪುರ ಓಣಿ ಮತ್ತು ಬಿಡ್ನಾಳ ಸರಹದ್ದಿನಲ್ಲಿ ಹಾದು ಹೋಗಿರುವುದು.

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985(13) ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು.

**ಕಾರ್ಯನಿರ್ವಾಹಕ ಅಭಿಯಂತರರು (ವಿ),**

ಪಿ.ಡಿ. 60 ಬೃಹತ್ ಕಾಮಗಾರಿ ವಿಭಾಗ, ಕ.ವಿ.ಪ್ರ.ನಿ.ನಿ., ಹುಬ್ಬಳ್ಳಿ.

**ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ನಡವಳಿಕೆಗಳು**

**ನಂ: ಡಿಆರ್‌ಟಿ:ಡಿಎಲ್‌ಎಸ್:46:2004-05, ದಿನಾಂಕ: 25ನೇ ಜೂನ್ 2005**

**ವಿಷಯ:** ಸ್ಥಗಿತಗೊಂಡ ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಬೆಳಗರಹಳ್ಳಿ, ತಿಪಟೂರು ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಉಪವಿಭಾಗ, ತಿಪಟೂರು ಇವರ ಪತ್ರ ಸಂಖ್ಯೆ: ಸನಿ-34: ಸಮಾಪನೆ:71:2004-05, ದಿನಾಂಕ: 18.12.2004 ಹಾಗೂ 7.6.2005.

2) ಈ ಕಛೇರಿಯ ಸಮಸಂಖ್ಯೆ ಕಾರಣ ಕೇಳುವ ನೋಟೀಸು ದಿನಾಂಕ: 6.4.2005.

**ಪ್ರಸ್ತಾವನೆ:-**

ಸ್ಥಗಿತಗೊಂಡಿರುವ ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಬೆಳಗರಹಳ್ಳಿ ತಿಪಟೂರು ತಾಲ್ಲೂಕು ಈ ಸಂಘದ ಕಾರ್ಯ ಚಟುವಟಿಕೆಗಳು ಸ್ಥಗಿತಗೊಂಡಿದ್ದು, ಸಂಘದ ಸದಸ್ಯರಿಗೆ ಕಾರ್ಯ ಚಟುವಟಿಕೆಗಳನ್ನು ಪ್ರಾರಂಭಿಸಲು ಆಸಕ್ತಿ ಇಲ್ಲದ ಕಾರಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಇವರು ಉಲ್ಲೇಖಿತ (1)ರ ದಿನಾಂಕ: 18.12.2004 ರ ಪತ್ರದಲ್ಲಿ ಪ್ರಸ್ತಾವನೆ ಸಲ್ಲಿಸಿ ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿದ್ದರು. ಈ ಸಂಬಂಧ ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಉಲ್ಲೇಖಿತ (2)ರ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲು ತಿಪಟೂರು ಉಪ ವಿಭಾಗೀಯ ಸಹಾಯಕ ನಿಬಂಧಕರಿಗೆ ರವಾನಿಸಲಾಗಿತ್ತು. ಸದರಿ ಕಾರಣ ಕೇಳುವ ನೋಟೀಸುಗಳನ್ನು ಸಂಘದ ಆಡಳಿತ ಮಂಡಳಿ ಸದಸ್ಯರು ತಿರಸ್ಕರಿಸಿದ್ದು ನೋಟೀಸುಗಳನ್ನು ಅವರ ವಾಸದ ಮನೆ ಬಾಗಿಲುಗಳಿಗೆ ಚುಟುಕಾಯಿಸಿ, ಈ ಬಗ್ಗೆ ಇಬ್ಬರು ಸಾಕ್ಷಿಗಳಿಂದ ಸಹಿ ಪಡೆದಿರುವ ಸಹಾಯಕ ನಿಬಂಧಕರ ಕಛೇರಿಯ ಜಾರಿಗಾರರ ಜಾರಿ ಕ್ರಮದ ಸ್ವೀಕೃತಿಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ತಿಪಟೂರು ಇವರ ಉಲ್ಲೇಖಿತ (1)ರ ದಿನಾಂಕ: 7.6.2005 ರ ಪತ್ರದೊಂದಿಗೆ ಸಲ್ಲಿಸಿರುತ್ತಾರೆ. ಇದುವರೆವಿಗೂ ಸಂಘದ ಸಮಾಪನೆ ಬಗ್ಗೆ ಆಡಳಿತ ಮಂಡಳಿ ಸದಸ್ಯರುಗಳು ಆಕ್ಷೇಪಣೆ ಸಲ್ಲಿಸಿರುವುದಿಲ್ಲ. ಇವರ ಆಕ್ಷೇಪಣೆಗಳು ಏನೂ ಇಲ್ಲವೆಂದು ಭಾವಿಸಲಾಗಿದೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಗಣಿಸಿ ಸಂಘವನ್ನು ಸಮಾಪನೆಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(2)(ಬಿ) ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸಿ ಟಿ.ವಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಮಹಿಳಾ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಬೆಳಗರಹಳ್ಳಿ, ತಿಪಟೂರು ತಾಲ್ಲೂಕು ಈ ಸಂಘವನ್ನು ಸಮಾಪನೆಗೊಳಿಸಿ ಸಹಾಯಕ ವ್ಯವಸ್ಥಾಪಕರು, ತುಮಕೂರು ಜಿಲ್ಲಾ ಹಾಲು ಉತ್ಪಾದಕರ ಸಹಕಾರ ಸಂಘಗಳ ಒಕ್ಕೂಟ ನಿಯಮಿತ, ಹಾಲು ಶಿಥಲೀಕರಣ ಕೇಂದ್ರ ಕಿಬ್ಬನಹಳ್ಳಿ, ತಿಪಟೂರು ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಕೂಡಲೇ ಸಂಘದ ಪ್ರಭಾರ ಪಡೆದು, ಸಂಘದ ಆಸ್ತಿ ಜವಾಬ್ದಾರಿಯನ್ವಯ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಆದ್ಯತಾ ಪಟ್ಟಿಗೆ ಅನುಮೋದನೆ ಪಡೆದುಕೊಂಡು ಆಸ್ತಿ ಜವಾಬ್ದಾರಿಗಳನ್ನು ಶೀಘ್ರವಾಗಿ ವಿಲೇವಾರಿ ಮಾಡಿ ಸದರಿ ಸಂಘದ ನೋಂದಣಿ ರದ್ದತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವು ಕೂಡಲೇ ಜಾರಿಗೆ ಬರುವುದು. ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ದಿನಾಂಕ: 25.6.2005 ರಂದು ಹೊರಡಿಸಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್. 959 ತುಮಕೂರು ಜಿಲ್ಲೆ.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ**

**ತಿದ್ದುಪಡಿ**

**ಸಂಖ್ಯೆ: ಗ್ರಾಅಪ 12 ಸ್ವಜಯೋ 05, ಬೆಂಗಳೂರು, ದಿನಾಂಕ: 21ನೇ ಜೂನ್ 2005**

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 12 ಸ್ವಜಯೋ 05, ದಿನಾಂಕ: 23.5.2005 ರಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯತಿಗಳಿಗೆ ರಾಜ್ಯದ ಪಾಲಿನ ಹಣ ರೂ. 6,39,70,000.00 (ರೂ. ಆರು ಕೋಟಿ ಮೂವತ್ತೊಂಬತ್ತು ಲಕ್ಷದ ಎಪ್ಪತ್ತು ಸಾವಿರ ಮಾತ್ರ) ಗಳನ್ನು ಪ್ರಧಾನ ಲೆಕ್ಕ ಶೀರ್ಷಿಕೆ

